# ಸಪ್ತಗಿರಿ

ಬೆಲೆ : ರೂ ೧



ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಪಾಪೋಸು ಹೋದುವಲ್ಲ ಸ್ವಾಮಿ ಎನ್ನ
ಪಾಪೋಸು ಹೋದುವಲ್ಲ || ಪ ||

ಆವಾರ ದಿನಗಳಿಂದ ಆರ್ಜನೆ ಮಾಡಿದ || ಅಪ ||

ಉರಗಾದ್ರಿಯಲಿ ಸ್ವಾಮಿ ಪುಷ್ಕರಿಣಿ ಮೊದಲಾದ
ಪರಿಸರ ತೀರ್ಥ ಸ್ನಾನಗಳ ಮಾಡಿ
ಹರಿದಾಸರ ಕೂಡಿ ಗಿರಿರಾಯನ ಮೂರ್ತಿ
ದರುಶನದಲ್ಲಿ ಮೈಮರೆತಿರಲು ಎನ್ನ || ೧ ||

ಪರಮಭಾಗವತರ ಹರಿಕಥೆ ಕೇಳಲು
ಪರಮಭಕುತಿಯಿಂದ ಕೇಳುತಿರೆ
ಪರಮ ಪಾಪಿಗಳ ಪಾಲಾಗಿ ಪೋದುವು
ಪರಮ ಪುರುಷನ ಮನಸೀಗೆ ಎಂದೀಗ || ೨ ||

ಮಾಯಾದೇವಿ ಎನಗೆ ಮೆಚ್ಚಿ ಕೊಟ್ಟಿದ್ದಳು
ದಾಯಾದಿಗಳು ನೋಡಿ ಸಹಿಸಲಿಲ್ಲ
ಮಾಯಾರಮಣ ನಮ್ಮ ಪುರಂದರ ವಿಠಲನ
ಮಾಯದಿಂದಲಿ ಮಟ್ಟ ಮಾಯವಾದವು || ೩ ||

—ಶ್ರೀ ಪುರಂದರದಾಸರು

ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲೆ



## ವಾರ್ಷಿಕ ತೆಪ್ಪೋತ್ಸವ

**14-3-92 ರಿಂದ 18-3-92 ವರೆಗೆ**

| | | |
|---|---|---|
| **14-3-92** | ಶನಿವಾರ | ಶ್ರೀ ಕೋದಂಡ ರಾಮಸ್ವಾಮಿಯವರ ತೆಪ್ಪೋತ್ಸವ |
| **15-3-92** | ಭಾನುವಾರ | ಶ್ರೀ ಕೃಷ್ಣಸ್ವಾಮಿಯವರ ತೆಪ್ಪೋತ್ಸವ |
| **16-3-92** | ಸೋಮವಾರ | ಶ್ರೀ ವೆಂಕಟೇಶ್ವರ ಸ್ವಾಮಿಯವರ ತೆಪ್ಪೋತ್ಸವ |
| **17-3-92** | ಮಂಗಳವಾರ | ಶ್ರೀ ವೆಂಕಟೇಶ್ವರ ಸ್ವಾಮಿಯವರ ತೆಪ್ಪೋತ್ಸವ |
| **18-3-92** | ಬುಧವಾರ | ಶ್ರೀ ವೆಂಕಟೇಶ್ವರ ಸ್ವಾಮಿಯವರ ತೆಪ್ಪೋತ್ಸವ |

ಫಾಲ್ಗುಣ ಮಾಸದ ಪೂರ್ಣಿಮೆಯಂದೂ ಹಿಂದು ಮುಂದಿನ ದಿನಗಳಲ್ಲೂ ನಡೆಯುವ ತೆಪ್ಪೋತ್ಸವದಲ್ಲಿ ಸ್ವಾಮಿ ಪುಷ್ಕರಿಣಿಯಲ್ಲಿ ತಿರುಮಲೆಯ ದೇವಾಲಯದ ಉತ್ಸವಮೂರ್ತಿಗಳ ವಿಹಾರ ನಯನಾನಂದಕರ ಆತ್ಮ ತೃಪ್ತಿಕರ

ತಾವೂ ಬನ್ನಿ ತಿ ತಿ ದೇ ನಿಮ್ಮವರನ್ನೂ ಕರೆತನ್ನಿ



ಗೌರವ ಸಂಪಾದಕರು
ಶ್ರೀ ಎಂ ವಿ ಎಸ್ ಪ್ರಸಾದ್ ಐ ಎ ಎಸ್
ಕಾರ್ಯನಿರ್ವಹಣಾಧಿಕಾರಿ
ತಿ ತಿ ದೇ ತಿರುಪತಿ

ಸಂಪಾದಕ
ಕೆ ಸುಬ್ಬಾರಾವು ಎಂ ಎ

ಉಪಸಂಪಾದಕ
ಬಿ ಎನ್ ಶ್ರೀನಿವಾಸನ್ ಎಂ ಎ

ಮುದ್ರಣ
ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು

**ಬಿಡಿ ಪ್ರತಿ ೧-೦೦**
**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ ಪತ್ರಿಕೆಯ ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ —ಸಂ||

**ಸಂಪುಟ ೨೨] ಫೆಬ್ರವರಿ ೧೯೯೨ [ಸಂಚಿಕೆ ೯**

# ವಿಷಯಸೂಚಿ



ಮುಖಚಿತ್ರ ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯ

ಹಿಂಬದಿಯಲ್ಲಿ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಪುಷ್ಕರಿಣಿ

ಒಳಗಡೆ
1 ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ
2 ಶ್ರೀ ಕಪಿಲತೀರ್ಥದಲ್ಲಿ ಬ್ರಹ್ಮೋತ್ಸವದ ಪ್ರಯುಕ್ತ ವಾಹನೋತ್ಸವಗಳು

# ಸಂಪಾದಕೀಯ

ಸೂರ್ಯನನ್ನು ಜಗಚ್ಚಕ್ಷು ಎಂದರು ದೇವತೆಯೆಂದರು ನಾರಾಯಣನೆಂದೇ ಕರೆದರು ವಿಶ್ವದ ಕ್ಷೀರಪಥದ ಒಂದಂಚಿನಲ್ಲಿರುವ ಹಲವಾರು ಸೌರ ಕುಟುಂಬಗಳಲ್ಲಿ ಸೂರ್ಯನೂ ಒಂದು ಕುಟುಂಬದವನು ತನ್ನ ಪಾಡಿಗೆ ತಾನು ತನ್ನ ಕುಟುಂಬದವರನ್ನು ಹಿಡಿತದಲ್ಲಿಟ್ಟುಕೊಂಡು ಕಾಲ ಮಾರ್ಗವನ್ನು ತುಳಿಯುತ್ತಿರುವ ನಿತ್ಯಜೀವಿ ತನ್ನ ಕುಟುಂಬದಲ್ಲಿನ ಹಲವು ಹನ್ನೊಂದು ರೀತಿಯ ವಾತಾವರಣಕ್ಕೆ ಕಾರಣನಾಗಿ ನಡೆದಿದ್ದಾನೆ ಎಂಬುದು ನಂತರ ವಿಜ್ಞಾನ ಶಾಸ್ತ್ರ ರೀತ್ಯ ಸಿದ್ಧವಾದದ್ದೇ ಆದರೂ ಅದರಿಂದ ಭಾರತೀಯ ಋಷಿ ಮುನಿಗಳು ಕಂಡ ಸತ್ಯಕ್ಕೆ ಕುಂದೇನೂ ಇಲ್ಲ

ಸೂರ್ಯನಿಂದಲೇ ಜೀವದ್ರವ್ಯ ಸೂರ್ಯನಿಂದಲೇ ಜೀವಪೋಷಣೆ ಹಾಗೂ ಸೂರ್ಯನಿಂದಲೇ ಮಿತ್ತಿನ ಮುಚ್ಚು ಪರದೆಯೆಂದರೆ ಅದನ್ನು ಎಲ್ಲ ಸಿದ್ಧಾಂತಗಳು ಒಪ್ಪುತ್ತವೆ ಗ್ರಹಗತಿಗಳು ವ್ಯಕ್ತಿಜೀವನದ ಮೇಲೆ ಯಾವ ಪ್ರಭಾವವನ್ನೂ ಬೀರಲಾರವು ಎಂಬ ವೀರ ವಿಜ್ಞಾನಿಗಳೂ ಸೂರ್ಯನಂತಹ ಒಂದು ನಕ್ಷತ್ರ ಮಾತ್ರದಿಂದಾಗಿ ತಾವು ತಮ್ಮ ವಾದವನ್ನು ಮುಂದು ಮಾಡುವ ಸಾಧ್ಯತೆಯೆಂಬುದನ್ನು ಮರೆಯುವಂತಿಲ್ಲ ಸೂರ್ಯ ಜೀವ ರಕ್ಷಕ ಎಂಬುದನ್ನು ಒಪ್ಪಿದರೂ ಆರಾಧನೆಯ ತಂತ್ರವೇಕೆ ಎಂಬ ಸೊಲ್ಲು ಕೇಳಿಬರಬಹುದು

ಆರಾಧನೆಯೆಂಬುದೇ ಅತೀತದೊಡನೆ ಸಂಬಂಧ ಬೆಳೆಸುವ ಅಪೇಕ್ಷೆಯ ಒಂದು ತಂತ್ರ ಅದು ವಿಶ್ವಚೇತನ ದೊಡನೆ ಮಾನವ ಚೇತನ ಹೊಂದಿರುವ ಹೊಂದಬೇಕಾದ ಸಂಬಂಧದ ಒಂದು ಸಂಕೇತ ಮಾತ್ರ ಹಾಗಾಗಿ **ಆರಾಧನೆ** ಮನುಷ್ಯ ನಡೆದ ಹಾದಿಯ ಗುರುತು ಈ ಗುರುತುಗಳನ್ನು ಆರಾಧನೆಯನ್ನು ಜಗತ್ತಿನ ಎಲ್ಲ ಜನಾಂಗಗಳಲ್ಲಿಯೂ ಕಾಣಬಹುದು ಎಲ್ಲರೂ ಅನಂತಕಾಲದಿಂದಲೂ ಈ ಮಾರ್ಗವನ್ನು ಅರಿಯದವರಂತೆ ಅನುಸರಿಸಿದವರೇನಲ್ಲ ಆಗಾಗ ಅಲ್ಲಿಗಲ್ಲಿಗೆ ಪ್ರಶ್ನೆಗಳನ್ನು ಎತ್ತಿಕೊಂಡೇ ಗೊಂದಲಗಳ ಬಿಡುಗಡೆಗೆ ಅವರವರ ಕೈಲಾದ ರೀತಿಯಲ್ಲಿ ಪ್ರಯತ್ನಿಸಿದ್ದುಂಟು ಹಾಗಾಗಿಯೇ ಭಾರತೀಯ ಪರಂಪರೆಯಲ್ಲಿ ಮೊದಲಿಗೆ ಪ್ರಕೃತಿಯ ಹಲವಾರು ಪೂಜಾರ್ಹ ವಸ್ತು ವಿಷಯಗಳಲ್ಲಿ ಒಂದಾದ ಸೂರ್ಯ ಕ್ರಮೇಣ ಸೂರ್ಯನಾರಾಯಣನೂ ಆಗಿ ರವಿ ಶಂಕರನೂ ದಿವಸ್ಪತಿಯೂ ಆದ

ಸೂರ್ಯನನ್ನು ದಿನವೂ ಆರಾಧಿಸಲಾಗುತ್ತದೆ ಸಂಪೂರ್ಣ ಭಾರತೀಯವಾದ ಯೋಗ ಭ್ಯಾಸದಲ್ಲಿ ಸೂರ್ಯನ ಹೆಸರು ಹೇಳಿಕೊಂಡು ಪ್ರಾತ ಕಾಲದಲ್ಲಿ ಸೂರ್ಯನಮಸ್ಕಾರ ಮಾಡುವುದಿದೆ ಸೂರ್ಯನಿಗೆ ಸಂಧಿಕಾಲಗಳಲ್ಲಿ ಅರ್ಘ್ಯಕೊಡುವುದೂ ಉಂಟು ಇಲ್ಲಿ ಜೀವರಕ್ಷಕನಾದ ಅವನನ್ನು ಮಿತ್ರನೆಂದು ತಿಳಿದು ಗೌರವಿಸುವುದೂ ಉಂಟು

ಸೂರ್ಯನನ್ನು ರಥಸಪ್ತಮಿಯದಿನ ವಿಶೇಷವಾಗಿ ಆರಾಧಿಸಲಾಗುತ್ತದೆ ಅಂದು ವಿಶ್ವರಥಿಯೂ ಮಹಾರಥಿಯೂ ಆದ ನಿತ್ಯ ಯಾತ್ರಿಯಾದ ಅವನನ್ನು ಹಲವಾರು ಪ್ರಕೃತಿ ಶಕ್ತಿಗಳ ಆಲಂಬನ ಪಡೆದು ಜೀವನದಲ್ಲಿ ನಿತ್ಯಯಾತ್ರಿಗಳಾದ ನಾವು ಆರಾಧಿಸಿ ಒಳಿತನ್ನು ಬೇಡುವುದು ಸನಾನತನ ಧರ್ಮದ ಒಂದು ಪರಂಪರೆಯಾಗಿ ಬೆಳೆದು ಎಂದಿತು ಇದರಿಂದಾಗಿ ಮುಂದಿನ ವರ್ಷದಲ್ಲಿ ಪ್ರಾಕೃತಿಕವಾದ ಅವಗಢಗಳುಂಟಾಗದೆ ಬದುಕು ಸಾಗಲಿ ಎಂಬುದು ಉದ್ದೇಶ ಇಂತಲ್ಲ ರಥಸಪ್ತಮಿಯಂದು ಸೂರ್ಯನಿಗೆ ನಮ್ಮ ಜೀವನದ ಎಲ್ಲ ಸುಖಗಳಿಗೆ ಕಾರಣವಾದ ಮೂಲಶಕ್ತಿ ಅವನೇ ಆದ್ದರಿಂದ ಕೃತಜ್ಞತೆಯನ್ನು ತೋರಿಸಿ ಮುಂದುವರೆಯುವುದೂ ಸಭ್ಯ ಸಂಸ್ಕೃತಿಯ ಲಕ್ಷಣ ಅದು ಸನಾತನ ಧರ್ಮಕ್ಕೆ ಆತ್ಮಗತವಾದದ್ದು ಕಲ್ಲುಕೊಟ್ಟವ್ಗೆ ಎಲ್ಲ ಭಾಗ್ಯವು ಬರಲಿ ಎನ್ನುತ್ತ ಹಿಟ್ಟು ಬೀಸಲು ಬೀಸುವ ಕಲ್ಲನ್ನು ಎರವಲು ಕೊಟ್ಟವರಿಗೆ ಒಳಿತನ್ನು ನೆನೆಯುವ ಜನಪದರಲ್ಲಿ ಜೀವನವನ್ನು ನೀಡಿದ ಸೂರ್ಯನಿಗೆ ಯಾವ ರೀತಿಯಲ್ಲಿ ಒಳಿತಬಯಸಬೇಕು ಕೃತಜ್ಞತೆ ಸೂಚಿಸಬೇಕು - ಗೌರವದಿಂದ ಭಕ್ತಿಯಿಂದ ಕೈಮುಗಿದು ನಮಸ್ಕಾರ ಮಾಡುವುದಲ್ಲಿದೆ

"ಓಂ ಮಿತ್ರಾಯ ನಮ."

* * * * * *

# ಆಚಾರ್ಯರಿಗೊಲಿದ
# ಉಡುಪಿಯ ಶ್ರೀಕೃಷ್ಣ

**ವಿದ್ವಾನ್ ಬೀಮಾಚಾರ್ಯಗುಡಿ**

ಅದೊಂದು ಸುಂದರವಾದ ಮುಂಜಾವು ದಿನ ಮಣಿಯ ಕಿರಣಗಳು ಭೂಮಂಡಲದಲ್ಲಿ ಪಸರಿಸಿವೆ ಹಕ್ಕಿಗಳ ಮಧುರಗಾನ ಕೇಳಿಬರುತ್ತದೆ ಮಂದಮಾರುತ ಬೀಸುತ್ತಲಿದೆ ನಾನಾ ತರದ ಹೂಗಳು ಅರಳಿ ನೋಟಕರ ಮನಸ್ಸನ್ನು ವಿಕಾಸಗೊಳಿಸುತ್ತಲಿವೆ ಎಲ್ಲೆಡೆಯಲ್ಲಿಯೂ ಪ್ರಶಾಂತತೆ ಹಾಗೂ ಪ್ರಸನ್ನತೆ ತುಂಬಿಕೊಂಡಿದೆ ಇಂತಹ ಮಧುರ ಮಯ ಸಮಯದಲ್ಲಿ ಶ್ರೀ ಮನ್ಮಧ್ವಾಚಾರ್ಯರು ವಿಶಾಲವಾದ ಅರಬೀ ಸಮುದ್ರತೀರದ ಜಡಬಂಡೇಶ್ವರ (ಈಗಿನ ಮಲ್ಪೆ) ಹತ್ತಿರ ಧ್ಯಾನಾಸಕ್ತರಾಗಿ ಕುಳಿತಿದ್ದಾರೆ ಕೆಲವು ಹೊತ್ತಿನ ಮೇಲೆ ಕಣ್ತೆರೆದು ನೋಡಿದಾಗ ಎದುರಿಗೆ ಸಮುದ್ರದಲ್ಲಿ ದ್ವಾರಾವತಿಯಿಂದ ಸಾಗಿ ಬರುವ ಒಂದು ಹಡಗವು ಬಿರುಗಾಳಿಯ ಅಬ್ಬರಕ್ಕೆ ತೆರೆಗಳೊಡನೆ ಹೊಯ್ದಾಡಿ ಮುಳುಗುವ ಸ್ಥಿತಿಯಲ್ಲಿದ್ದಿತು ಲೋಕಕಲ್ಯಾಣವನ್ನೇ ಬಯಸುವ ಆ ಯತಿಗಳು ತಮ್ಮ ಮೈಮೇಲಿನ ಶಾಟಿಯನ್ನೋ ಹಾರಿಸಿ ಆ ಘೋರ ದುರಂತವನ್ನು ತಪ್ಪಿಸಿದರು ಈ ಆಕಸ್ಮಿಕ ನೆರವಿನಿಂದ ಸಂತುಷ್ಟನಾದ ನಾವಿಕನು ಆಚಾರ್ಯರನ್ನು ಕೃತಜ್ಞತೆಯಿಂದ ವಂದಿಸಿದನು ಅವರ ಅಪೇಕ್ಷೆಯಂತೆ ತನ್ನ ಹಡಗದಲ್ಲಿ ತಂದಿದ್ದ ಗೋಪೀ ಚಂದನದ ಗಟ್ಟಿಯನ್ನೇ ಕಾಣಿಕೆಯಾಗಿ ಕೊಟ್ಟನು ಶ್ರೀಮದಾಚಾರ್ಯರು ಸಂತೋಷದಿಂದ ಸ್ವೀಕರಿಸಿ ಅದನ್ನು ತೊಳೆದು ನೋಡಲಾಗಿ ಚಕ್ರಾಂಕಿತ ಸುದರ್ಶನ ಶಿಲಾಮಯವಾದ ಬಾಲಗೋಪಾಲ ವಿಗ್ರಹವು ಗೋಚರವಾಯಿತು

ಬಲಗೈಯಲ್ಲಿ ಕಡೆಗೋಲು ಎಡಗೈಯಲ್ಲಿ ಕಡೆಯುವ ಹಗ್ಗ (ವೇಣು) ಹಿಡಿದ ಕೃಷ್ಣನ ಮೂರ್ತಿ ಬಹು ಸುಂದರವಾಗಿತ್ತು ಸಂಸಾರ ಸಮುದ್ರದಲ್ಲಿ ಮುಳುಗಿ ತೊಳಲಾಡುತ್ತಿರುವರಿಗೆ ಅಮೃತೋಪಮವಾದ ಭಕ್ತಿ ಜ್ಞಾನ ವೈರಾಗ್ಯಗಳನ್ನು ನೀಡುತ್ತೇನೆಂದು ಬಾಲಕೃಷ್ಣನು ಕೈಯ್ಯಲ್ಲಿ ಕಡೆಗೋಲು ಮತ್ತು ಹಗ್ಗಗಳನ್ನು ಹಿಡಿದಿದ್ದಾನೆಂದು ವಾದಿರಾಜಯತಿಗಳು ಹೇಳಿದ್ದಾರೆ ಶ್ರೀಮದಾಚಾರ್ಯರು ವಡಭಾಂಡೇಶ್ವರದಲ್ಲಿ ಬಲರಾಮ ಮೂರ್ತಿಯನ್ನು ಸ್ಥಾಪಿಸಿದರು ನೈಸರ್ಗಿಕ ಸೌಂದರ್ಯದಿಂದ ಕೂಡಿದ ಕರಾವಳಿ ಪ್ರದೇಶದಿಂದ ಶ್ರೀ ಬಾಲಕೃಷ್ಣ ವಿಗ್ರಹವನ್ನು ಮಗುವಿನಂತೆ ಅನಾಯಾಸವಾಗಿ ಎತ್ತಿಕೊಂಡು ಸಂತೋಷದಿಂದ ಸ್ತೋತ್ರ ಹೇಳುತ್ತ ರಜತಪೀಠಪುರಿಗೆ ಸಾಗಿದರು

ಮತ್ಸಕರೂಪಲಯೋ ವಿಹಾರಿನ್
ದೇವಹಿತೇತ್ಪಕ ಚತುರ್ಮುಖವಾದ್ಯ
ಕೂರ್ಮಸ್ವರೂಪ ಮಂದರಧಾರಿನ್
ಲೋಕವಿದಾರಕ ದೇವವರೇಣ್ಯ



ದೇವತಾಮಂಡಲ ಖಂಡಮಂಡನಂ
ಓಂ ಆನಂದಮುಕುಂದ ಅರವಿಂದ ನಯನ
ಆನಂದತೀರ್ಥ ಪರಾನಂದವರದ
ಸುಂದರೀ ಮಂದಿರ ಗೋವಿಂದ ವಂದೇ
ಆನಂದ ತೀರ್ಥ ಪರಾನಂದವರದ
ವೃಂದಾರಕ ವೃಂದ ಸುವಂದಿತ ವಂದೇ
ಆನಂದತೀರ್ಥ ಪರಾನಂದ ವರದ
ಇಂದಿರಾನಂದಕ ಸುಂದರ ವಂದೇ
ಆನಂದತೀರ್ಥ ಪರಾನಂದ ವರದ

ಹೀಗೆ ರಾಗ ತಾಳ ಮೃದಂಗಗಳೊಂದಿಗೆ ನರ್ತನ ಮಾಡುತ್ತ ಸಂಭ್ರಮದಿಂದ ಈಗಿನ ಉಡುಪಿ ಕ್ಷೇತ್ರ (ರಜತಪೀಠಪುರಿ)ಗೆ ಬಂದರು ಈ ರೂಪ್ಯಪೀಠಪುರವು ಮೂರು ಲೋಕಗಳಲ್ಲಿಯೂ ಅಸಾಧಾರಣವಾದದ್ದು ಕಾಶಿಯಂತೆ ಈ ಕ್ಷೇತ್ರವೂ ರುದ್ರಾದಿದೇವತೆಗಳಿಂದ ಸೇವಿಸಲ್ಪಡುತ್ತದೆ ಅನಂತಾಸನ ದೇವರ ಅಪೇಕ್ಷೆಯಂತೆ ಗಂಗೆಯು ಮಧ್ವಸರೋವರದಲ್ಲಿ ಕಾಣಿಸಿಕೊಂಡಳು ಅಂತೆಯೇ ಇದು ಅಪ್ರತಿಮವಾದ ಪವಿತ್ರ ಕ್ಷೇತ್ರವಾಗಿದೆಯೆಂದು ವಾದಿರಾಜರು ತೀರ್ಥಪ್ರಬಂಧದಲ್ಲಿ ಹೇಳಿದ್ದಾರೆ ನಿಸರ್ಗರಮಣೀಯವಾದ ಈ ಪ್ರದೇಶದಲ್ಲಿ ರಾಮಭೋಜನೆಂಬ ರಾಜನು ಅಶ್ವಮೇಧಯಾಗ ಮಾಡಿದ್ದನು ಯಾಗಾಂತ್ಯದಲ್ಲಿ ಪರಶುರಾಮನು ಪ್ರತ್ಯಕ್ಷನಾಗಿ ಇದು ರೂಪ್ಯಪೀಠಪುರವೆಂದು ಪ್ರಖ್ಯಾತವಾಗಲಿ ಎಂದನು ಈ ಪಟ್ಟಣವು ರೂಪ್ಯಾತ್ಮಕಸ್ಥ (ಬೆಳ್ಳಿಮಯ) ವಾಗಿರುವುದರಿಂದ ಈ ಹೆಸರು ಬಂದಿತೆಂದು ಅಭಿಪ್ರಾಯ ಅಬ್ಜಾರಣ್ಯವೆಂದು ಹೆಸರು ಪಡೆದಿರುವ ಈ ಸ್ಥಳದಲ್ಲಿ ಉಡುಪ (ನಕ್ಷತ್ರಗಳಿಗೆ ಒಡೆಯನಾದ ಚಂದ್ರನು) ತಪಸ್ಸು ಮಾಡಿ ಸಿದ್ಧಿಯನ್ನು ಹೊಂದಿದ್ದರಿಂದ ಇದು ಉಡುಪಿಯೆಂದು ಪ್ರಸಿದ್ಧವಾಗಿದೆ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವ ಮೂರ್ತಿ ಇಲ್ಲಿದ್ದು ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರ ಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| ಭಾನು ಸೋಮ ಮಂಗಳ ಬುಧ ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ ೫.೦೦ ಪ್ರಾ ೫.೩೦ | ಪ್ರಾ ೫.೦೦ ಪ್ರಾ ೫.೩೦ |
| ವಿಶ್ವರೂಪ ಸರ್ವದರ್ಶನ | ಪ್ರಾ ೫.೩೦ ಪ್ರಾ ೬.೦೦ | ಪ್ರಾ ೫.೩೦ ಪ್ರಾ ೬.೦೦ |
| ತೋಮಾಲ ಕೊಲುವು | | |
| ಪಂಚಾಂಗಶ್ರವಣ | ಪ್ರಾ ೬.೦೦ ಪ್ರಾ ೬.೩೦ | ಪ್ರಾ ೬.೦೦ ಪ್ರಾ ೬.೩೦ |
| ಸಹಸ್ರನಾಮಾರ್ಚನೆ | ಪ್ರಾ ೬.೩೦ ಪ್ರಾ ೭.೦೦ | ಪ್ರಾ ೬.೩೦ ಪ್ರಾ ೭.೦೦ |
| ಮೊದಲನೇ ಗಂಟೆ | ಪ್ರಾ ೭.೦೦ ಪ್ರಾ ೭.೩೦ | ಪ್ರಾ ೭.೦೦ ಪ್ರಾ ೭.೩೦ |
| ಸರ್ವದರ್ಶನ | ಪ್ರಾ ೭.೩೦ ಪ್ರಾ ೧೦.೦೦ | *ಅಭಿಷೇಕ ಪ್ರಾ ೭.೩೦ ಪ್ರಾ ೮.೩೦ |
| | | ಸಮರ್ಪಣ ಪ್ರಾ ೮.೩೦ ಪ್ರಾ ೯.೩೦ |
| ೨ನೇ ಅರ್ಚನೆ | | |
| ೨ನೇ ಗಂಟೆ | ಪ್ರಾ ೧೦.೦೦ ಪ್ರಾ ೧೦.೩೦ | ಪ್ರಾ ೯.೩೦ ಪ್ರಾ ೧೦.೩೦ |
| * ಆರ್ಜಿತ | | ಕಲ್ಯಾಣೋತ್ಸವ ಪ್ರಾ ೧೦.೩೦ ಮ ೧೨.೦೦ |
| ಸರ್ವದರ್ಶನ | ಪ್ರಾ ೧೦.೩೦ ಸಂ ೬.೩೦ | ಪ್ರಾ ೧೦.೩೦ ಸಂ ೬.೩೦ |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ ೬.೩೦ ರಾ ೭.೦೦ | ಸಂ ೬.೩೦ ರಾ ೭-೦೦ |
| ಸರ್ವದರ್ಶನ | ರಾ ೭.೦೦ ರಾ ೮.೪೫ | ರಾ ೭.೦೦ ರಾ ೮.೪೫ |
| ಏಕಾಂತ ಸೇವೆ | ರಾ ೮.೪೫ ರಾ ೯.೦೦ | ರಾ ೮.೪೫ ರಾ ೯.೦೦ |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ ೨೦೦.೦೦ |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ ೧೦೦.೦೦ |
| ಅರ್ಚನೆ (ಒಂದು ವರ್ಷಕ್ಕೆ) | ರೂ ೪೨.೦೦ |
| ಶಾಶ್ವತ ನಿತ್ಯಾರ್ಚನೆ | ರೂ ೫೪೨.೦೦ |

* * *

ಉಡುಪಿಯ ಮಹತ್ವವು ದ್ವೈತಮತ ಪ್ರತಿಷ್ಠಾಪನಾಚಾರ್ಯರಾದ ಶ್ರೀಮನ್ಮಧ್ವಾಚಾರ್ಯರಿಂದ ಆಯಿತಷ್ಟೇ ಅವರ ಬಗ್ಗೆ ವಿಷಯ ತಿಳಿದುಕೊಳ್ಳಬೇಕಾದುದು ನಮ್ಮ ಕರ್ತವ್ಯ

ಜಗತ್ತಿನಲ್ಲಿ ನಾಸ್ತಿಕವಾದವು ಹೆಚ್ಚುತ್ತ ಸಜ್ಜನರಿಗೆ ಮೋಕ್ಷೋಪಾಯದ ವಿಜ್ಞಾನ (ವೇದ ಶಾಸ್ತ್ರ, ಪುರಾಣಗಳು) ಕೆಡುತ್ತಿರಲು ಶ್ರೀಮನ್ನಾರಾಯಣನ ಪುತ್ರನಾದ ಶ್ರೀಮುಖ್ಯಪ್ರಾಣರು ಕಲಿವರ್ಷ ೪೩೩೮ ಶಾಲಿವಾಹನ ಶಕ ೧೧೬೦ ಕ್ರಿ ಶ ೧೨೩೮ ವಿಲಂಬಿಸಂವತ್ಸರದ ಆಶ್ವಯುಜ ದಶಮಿ ಬುಧವಾರದಂದು ಮಧ್ವಾಚಾರ್ಯರೆಂದು ಹೆಸರಿನಿಂದ ಅವತರಿಸಿದರು ಅವರ ಜನ್ಮಸ್ಥಳವಾದ ಪಾಜಕ ಕ್ಷೇತ್ರವು ವಿಮಾನಗಿರಿಯ ಸಮೀಪದಲ್ಲಿದೆ ಇಲ್ಲಿ ದುರ್ಗಾದೇವಾಲಯ ವಿರುವುದರಿಂದ ಇದಕ್ಕೆ ದುರ್ಗಾಬೆಟ್ಟವೆಂತಲೂ ಕರೆಯುತ್ತಾರೆ ನಾಲ್ಕು ಬದಿಗಳಲ್ಲಿ ಪರಶುತೀರ್ಥ ಧನುಸ್ತೀರ್ಥ ಗದಾತೀರ್ಥ ಪರಶುರಾಮ ತೀರ್ಥಗಳಿವೆ ಪಾಜಕ ಕ್ಷೇತ್ರದಲ್ಲಿ ಮಧ್ವಾಚಾರ್ಯರು ತೋರಿದ ಅನೇಕ ಬಾಲಲೀಲೆಗಳ ಕುರುಹುಗಳು ಇವೆ ತಾಯಿಯ ಕರೆ ಕೇಳಿ ದುರ್ಗಾಬೆಟ್ಟದಿಂದ ನೆಗೆದುಬಂದ ಸ್ಥಳದಲ್ಲಿ ಅವರ ಪಾದ ಚಿನ್ಹೆ ಮೂಡಿದೆ ಈ ಪವಿತ್ರಸ್ಥಳದಲ್ಲಿ ಶ್ರೀಮಧ್ವಾದಿರಾಜರು ಕಟ್ಟಿಸಿದ ಗುಡಿಯು ಕಂಗೊಳಿಸುತ್ತದೆ ಇದರ ಹತ್ತಿರವೇ ಶ್ರೀಮದಾಚಾರ್ಯರ ಹಿರಿಯರು ವಾಸಮಾಡಿದ ಮನೆ (ಮೂಡುಮಣೆ) ಯಿದೆ ಅದರ ಪಕ್ಕದಲ್ಲಿ ಶ್ರೀಮದಾಚಾರ್ಯರು ತಾಯಿಗಾಗಿ ನಿರ್ಮಿಸಿಕೊಟ್ಟ ವಾಸುದೇವತೀರ್ಥವಿದೆ ಮಧ್ವಾಚಾರ್ಯರ ತಂದೆಯ ಹೆಸರು ನಾರಾಯಣಭಟ್ಟ ತಾಯಿ ವೇದವತಿ ಇವರು ಮನೆತನದಿಂದ ನಡುಮನೆಭಟ್ಟ (ಮಧ್ಯಗೇಹಭಟ್ಟ) ರೆಂದು ಪ್ರಸಿದ್ಧರಾಗಿದ್ದರು ಇವರು ಉಡುಪಿಯ ದಕ್ಷಿಣದಲ್ಲಿ ಏಳು ಮೈಲಿ ದೂರದಲ್ಲಿರುವ ಪಾಜಕ ಕ್ಷೇತ್ರದಲ್ಲಿ ವಾಸವಾಗಿದ್ದರು ಭಟ್ಟರು ಮಗುವಿಗೆ ವಾಸುದೇವನೆಂದು ನಾಮಕರಣ ಮಾಡಿದರು, ಗರ್ಭಾಷ್ಟಮದಲ್ಲಿ ಮಗುವಿನ ಉಪನಯನ ಸಂಸ್ಕಾರ ಜರುಗಿಸಿದರು ಸನಕಾದಿಗಳ ಪರಂಪರೆಯಿಂದ ಬಂದ ಶ್ರೀ ಅಚ್ಯುತಪ್ರೇಕ್ಷರೆಂಬ ಯತಿಗಳಿಂದ ಪರಮಹಂಸ ಸನ್ಯಾಸ ದೀಕ್ಷೆಯನ್ನು ಪಡೆದು ಶ್ರೀಮಧ್ವ ಎಂಬ ಹೆಸರಿನಿಂದ ಪ್ರಖ್ಯಾತರಾದರು ಇವರನ್ನು ಸರ್ವಜ್ಞ, ಆನಂದತೀರ್ಥ, ಸುಖತೀರ್ಥ ಪೂರ್ಣಪ್ರಜ್ಞರೆಂಬ ಹೆಸರಿನಿಂದಲೂ ಕರೆಯುತ್ತಿದ್ದರು ಸನ್ಯಾಸವನ್ನು ಸ್ವೀಕರಿಸಿದ ನಂತರ ಜ್ಞಾನ ಪ್ರಸಾರ ಕಾರ್ಯಮಾ

ಡಿದರು ತಮ್ಮ ದಿವ್ಯ ಪ್ರತಿಭೆಯಿಂದ ಆಶ್ರಮ ಗುರುಗಳಾದ ಶ್ರೀ ಅಚ್ಯುತ ಪ್ರೇಕ್ಷಾಚಾರ್ಯರನ್ನು ಆಶ್ಚರ್ಯಗೊಳಿಸಿದರು ವಾದಿಸಿಂಹ ಬುದ್ಧಿ ಸಾಗರ ಮೊದಲಾದ ಪಂಡಿತರನ್ನು ವಾದದಲ್ಲಿ ಸೋಲಿಸಿ ಜಯಪತ್ರಿಕೆ ದೊರಕಿಸಿದರು ಸರ್ವಜ್ಞ ಎಂಬ ಗೌರವ ಸಾರ್ಥಕವಾಯಿತು ಆನಂದತೀರ್ಥರು ತಮ್ಮ ಗುರುಗಳೊಡನೆ ದಕ್ಷಿಣ ಭಾರತದಲ್ಲಿ ಸಂಚರಿಸಿ ಕೇರಳ ರಾಮೇಶ್ವರ ಶ್ರೀರಂಗ ಮೊದಲಾದ ಅನೇಕ ಕ್ಷೇತ್ರಗಳನ್ನು ಸಂದರ್ಶಿಸಿದರು ದಾರಿಯಲ್ಲಿ ದುರ್ವಾದಿಗಳನ್ನು ಗೆಲ್ಲುತ್ತ ಭಕ್ತರಿಗೆ ದರ್ಶನ ಮಾತ್ರದಿಂದಲೆ ಆನಂದವನ್ನು ನೀಡುತ್ತ ಅವರ ಅಭಿಲಾಷೆಗಳನ್ನು ಈಡೇರಿಸುತ್ತ ಸಂಚರಿಸಿದರು ಬದರಿಯಲ್ಲಿ ನಾರಾಯಣ ದೇವರ ಮುಂದೆ ಗೀತಾಭಾಷ್ಯವನ್ನು ಸಮರ್ಪಿಸಿದರು ನಾಲ್ಪತ್ತೆಂಟುದಿನ ಆಚಾರ್ಯರು ಕಾಷ್ಠಮೌನ ಶುದ್ಧ ಉಪವಾಸಗಳನ್ನು ಮಾಡುತ್ತ ಪಾರ ಪ್ರವಚನಗಳನ್ನು ಭಗವದಾರಾಧನೆಯನ್ನು ಮಾಡುತ್ತಿದ್ದರು ಎದರಿಯ ಮತ್ತೊಂದು ಪ್ರದೇಶದಲ್ಲಿರುವ ವೇದವ್ಯಾಸರನ್ನು ಕಂಡು ಅವರಿಂದ ಅನೇಕ ವಿಷಯಗಳನ್ನು ತಿಳಿದುಕೊಂಡು ಬದರಿಯ ಇನ್ನೊಂದು ಪಾರ್ಶ್ವದಲ್ಲಿರುವ ನಾರಾಯಣ ದೇವರನ್ನು ಸಂದರ್ಶಿಸಿ ಹಿಂದಿರುಗಿದರು ಈಗ ಮಧ್ವಾಚಾರ್ಯರನ್ನು ನೋಡಿ ಶಿಷ್ಯರಿಗೆ ಆನಂದವಾಯಿತು ಉಡುಪಿಗೆ ಬರುವಾಗ ದಾರಿಯಲ್ಲಿ ಶೋಭನಭಟ್ಟ ಎಂಬ ಪಂಡಿತನನ್ನು ಸೋಲಿಸಿದರು ಅಲ್ಲಲ್ಲಿ ದ್ವೈತ ಸಿದ್ಧಾಂತದ ಮಹತ್ವಗಳನ್ನು ಬಿತ್ತರಿಸ ಹತ್ತಿದರು ರಜತ ಪೀಠಪುರ (ಉಡುಪಿ) ಯಲ್ಲಿ ಶ್ರೀಕೃಷ್ಣ ವಿಗ್ರಹವನ್ನು ಪ್ರತಿಷ್ಠಾಪಿಸಿದರು ಅದರ ಪೂಜೆ ಉತ್ಸವಾದಿಗಳು ನಿರಂತರವಾಗಿ ಸಾಗುವಂತೆ ಪರ್ಯಾಯದ ಯೋಜನೆಮಾಡಿದರು ಶ್ರೀಮದಾಚಾರ್ಯರು ಮತಪ್ರಸಾರಕ್ಕಾಗಿ ಶ್ರೀ ಕೃಷ್ಣನ ಪೂಜಾ ಉತ್ಸವಗಳಿಗಾಗಿ ಎಂಟುಮಂದಿ ಬಾಲಯತಿಗಳಿಗೆ ಆಶ್ರಮವಿತ್ತು ಸ್ವಕರಾರ್ಚಿತ ಭಗವದ್ವಿಗ್ರಹಗಳನ್ನು ಆರಾಧ್ಯ ದೇವತೆಗಳನ್ನಾಗಿ ಅನುಗ್ರಹಿಸಿದರು

ಅವು (೧) ಶ್ರೀಕೃಷ್ಣಾಪುರ ಮಠ (೨) ಶ್ರೀ ಪುತ್ತಿಗೆಪಾಲ (೩) ಶ್ರೀ ಶಿರೂರಮಠ (೪) ಶ್ರೀ ಸೋದೆಮಠ (೫) ಶ್ರೀ ಕಾಣಿಯೂರಮಠ (೬) ಶ್ರೀ ಪೇಜಾವರಮಠ (೭) ಫಲಿಮಾರುಮಠ (೮) ಶ್ರೀ ಅದಮಾರು ಮಠ

ದ್ವಾಪರಯುಗದಲ್ಲಿ ಅಷ್ಟಮಹಿಷಿಯರಿಂದ ಪೂಜೆಗೊಳ್ಳುತ್ತಿದ್ದ ಶ್ರೀ ಬಾಲಕೃಷ್ಣಮೂರ್ತಿಯನ್ನು ಈಗ ಉಡುಪಿಯ ಅಷ್ಟಮಠದ ಬಾಲಸನ್ಯಾಸಿಗಳು ಪೂಜೆಮಾಡುತಾರೆ ಶ್ರೀ ಮಧ್ವಾಚಾರ್ಯರಿಂದ ನಿಯಮಿಸಲ್ಪಟ್ಟ ಈ ಪೂಜಾದಿಗಳ ಪರಂಪರೆಯು ಇಂದಿಗೂ ಪ್ರಚಾರದಲ್ಲಿದೆ ಈ ಯತಿಗಳು ಅಷ್ಟದಿಕ್ಪಾಲರಂತೆ ಇದ್ದು ಅವರ ಗುಣ ಧರ್ಮಗಳನ್ನು ಪಡೆದಿದ್ದಾರೆಂದು ಶ್ರೀವಾದಿ ರಾಜ ಯತಿಗಳು ತೀರ್ಥ ಪ್ರಬಂಧದಲ್ಲಿ ಸುಂದರವಾಗಿ ನಿರೂಪಿಸಿದ್ದಾರೆ

ಪೂರ್ವದಿಕ್ಪಾಲಕನು ಇಂದ್ರನು ಆತನು ವಜ್ರಧಾರಿಯಾಗಿದ್ದಾನೆ ಅದರಂತೆ ಈ ಎಂಟು ಯತಿಗಳೂ ಕೂಡ– ಹರೀಕರ್ತಾ ಜೀವೋನ್ಯ ಪರಮಾರ್ಥತ ವೇದಸ್ಸತ್ಯಂ ಪುರಾಣಂ ಚ ಇತ್ಯಾದಿ ವಾಕ್ಯಗಳೆಂಬ ಮಧ್ವತತ್ವದ ವಜ್ರಗಳನ್ನು ಧರಿಸಿರುವರು

ಆಗ್ನೇಯದ ದಿಕ್ಪಾಲಕನು ಅಗ್ನಿಯು ಈತನು ದಹನಕಾರ್ಯ (ಸುಡುವದರಲ್ಲಿ) ಅತಿಸಮರ್ಥನು ಅದರಂತೆ ಈ ಯತಿಗಳು ಪಾಪಗಳೆಂಬ ಹತ್ತಿಯರಾಶಿಯನ್ನು ಸುಡುವುದರಲ್ಲಿ ಸಮರ್ಥರು (ಅಗ್ನಿಯ ವೈಭವವುಳ್ಳವರು) ದಕ್ಷಿಣದಿಕ್ಪಾಲಕನಾದ ಯಮನು ದಂಡಧಾರಿಯು ಅದರಂತೆ ಈ ಯತಿಗಳೂ ಕೂಡ ಯೋಗದಂಡಧಾರಿಗಳಾಗಿರುವರು

ನೈಋತ್ಯ ದಿಕ್ಕಿನ ನಿಋತಿಯು ತೀಕ್ಷ್ಣ ಖಡ್ಗವನ್ನು ಧರಿಸಿದಂತೆ ಇವರು ಅಸಿಧಾರಾ ವ್ರತಿಗಳು ಅನಶನಾದಿ ವ್ರತಗಳನ್ನು ಆಚರಿಸುವವರು ಪಶ್ಚಿಮ ದಿಕ್ಕಿನ ಒಡೆಯನಾದ ವರುಣನು ಪಾಶಧಾರಿಯು ಅದರಂತೆ ಈ ಯತಿಗಳೂ ಶ್ರೀಕೃಷ್ಣನ ಭಕ್ತಿಪಾಶ ಧಾರಿಗಳು ವರುಣನಷ್ಟು ಯೋಗ್ಯತೆ ಯುಳ್ಳವರು

ವಾಯುವು ವಾಯವ್ಯದ ದಿಕ್ಪಾಲನು ವಾಯುವು ತನ್ನ ಸಂಚಾರದಿಂದ ಶ್ರಮವನ್ನು ಹೋಗಲಾಡಿಸುವಂತೆ ಈ ಸನ್ಯಾಸಿಗಳು ಲೋಕಸಂಚಾರಮಾಡಿ ಶಿಷ್ಯರ ಕಷ್ಟಕ್ರಮಗಳನ್ನು ಪರಿಹರಿಸುವರು

ಉತ್ತರ ದಿಕ್ಪಾಲಕ, ಚಂದ್ರನಂತೆ ತಂಪಾಗಿ ಶಾಂತರೀತಿಯಿಂದ ಇರುವರು ಈಶಾನ್ಯದ ದಿಕ್ಪತಿಯಾದ ಈಶ್ವರನು ವಿರಕ್ತನು ಅದರಂತೆ ಅಷ್ಟಮಠದ ಯತಿಗಳೂ ಕೂಡ ವಿರಕ್ತರು ಮೊದಲು ಸಂಪದ್ಭರಿತವಾದ ದ್ವಾರಕೆಯನ್ನು ಹಾಗೂ ಗೋಪಸ್ತ್ರೀಯರ ಪೂಜೆಯನ್ನೂ ತ್ಯಜಿಸಿದ ಬಾಲಕೃಷ್ಣನು ಈಗ ರೂಪ್ಯಪೀಠದಲ್ಲಿ ನೆಲೆಸಿ ಶ್ರೀಮಧ್ವಾಚಾರ್ಯರಿಂದ ಹಾಗೂ ಅವರ ಪರಂಪರೆಯ ಯತಿಗಳಿಂದ ನಿರಂತರವಾಗಿ ಪೂಜೆಗೊಳ್ಳುತ್ತಿದ್ದಾನೆ

ಸೋದೆಮಠದ ವಾದಿರಾಜರು ಶ್ರೀಕೃಷ್ಣನ ದಶಾವತಾರಗಳನ್ನು ವರ್ಣಿಸುತ್ತ "ಶ್ರೀಕೃಷ್ಣನೆ ಮತ್ಸ್ಯಾವತಾರದಲ್ಲಿ ನಿನ್ನಲ್ಲಿ ಚಾಂಚಲ್ಯವು ಕೂರ್ಮಾವತಾರದಲ್ಲಿ ಕಾಠಿಣ್ಯವು ವರಾಹಾವತಾರದಲ್ಲಿ ಅಧೋಮುಖನಾಗಿರುವದು ನರಸಿಂಹಾವತಾರದಲ್ಲಿ ಕೋಪವು ವಾಮನಾವತಾರದಲ್ಲಿ ಬಲಿಚಕ್ರವರ್ತಿಯ ಬಳಿ ಯಾಚನೆಯು ಪರಶುರಾಮಾವತಾರದಲ್ಲಿ ತಾಯಿಗೆ ಅಪಕಾರಮಾಡಿದ್ದು ರಾಮಾವತಾರದಲ್ಲಿ ಸೀತೆಗಾಗಿ ಏಕಪತ್ನೀವ್ರತಸ್ಥನಾದದ್ದು ಕೃಷ್ಣಾವತಾರದಲ್ಲಿ ಕಳ್ಳತನವು ಬುದ್ಧಾವತಾರದಲ್ಲಿ ಅಸಂಕಮೋಹನವು ಕಲ್ಕ್ಯಾವತಾರದಲ್ಲಿ ಅಶ್ವಾರೋಹಣಾದಿಚಾತುರ್ಯವು ಅತ್ಯಂತ ಆಶ್ಚರ್ಯಕರವಾಗಿದೆ ಎಂದು ಸ್ತೋತ್ರಮಾಡಿದರು ಇಂತಹ ಶ್ರೀಕೃಷ್ಣನು ನಮ್ಮನ್ನು ಕಾಪಾಡಲಿ ಎಂದರು

ರಥಬೀದಿಯ ಸುತ್ತಲು ಅಷ್ಟಮಠಗಳಿವೆ ಎದುರುಗಡೆ ಗೋಪುರವೂ ಕನಕನ ಕಿಂಡಿಯೂ ಇವೆ ಯಾತ್ರಿಕರು ಇಲ್ಲಿ ಶ್ರೀ ಕೃಷ್ಣಪಾದಧೂಳಿ ದರ್ಶನವನ್ನು ಮೊದಲು ಮಾಡತಕ್ಕದ್ದು ಮಂಟಪದ ಎದುರು ಕನಕನಗುಡಿ ಇದೆ ಆಗ್ನೇಯದಲ್ಲಿ ಶ್ರೀ ಕೃಷ್ಣನ ರಥಶಾಲೆಯು ನಗಾರಖಾನೆಯು ಇದೆ ಇಧ ಬೀದಿಯಲ್ಲಿ ಮುಳಬಾಗಿಲು ಮಠ ಭಂಡಾರ ಕೆರೆಮಠ ವ್ಯಾಸರಾಜಮಠ ಭೀಮಪತಚ್ಛ ಉತ್ತರಾದಿಮಠ ರಾಯರಮಠಗಳು ಇವೆ ಉಡುಪಿಯ ಪುರಾತನ ದೇವಾಲಯವಾದ ಅನಂತಾಸನ (ಅನಂತಶಯನ) ಕ್ಷೇತ್ರದಲ್ಲಿ ಪರಶುರಾಮನು ಪದ್ಮಸಾಧನ್ವರೂಪದಲ್ಲಿ ಸನ್ನಿಹಿತನಾಗಿದ್ದಾನೆ ಪರಶುರಾಮ ದೇವರು ಒಂದಂಶದಿಂದ ಲಿಂಗಾಕಾರದಲ್ಲಿ ಪ್ರಕಟವಾಗಿದ್ದಾರೆಂದು ಪೌರಾಣಿಕ ಕಥೆ ಇದೆ ಅನಂತನೆಂದರೆ ಮಹಾಶೇಷ ಅನಂತನೇ ಆಸನವಾಗಿ ಉಳ್ಳವನು ಶ್ರೀಮನ್ನಾರಾಯಣನು ಎಂಬರ್ಥದಲ್ಲಿ ಅನಂತಾಸನ ವೆಂದು ಕರೆಯುತ್ತಾರೆ ಅನಂತನಿಗೆ ಸ್ವಾಮಿಯಾಗಿರುವುದರಿಂದ ಅನಂತೇಶ್ವರನೆಂದು ಪ್ರಸಿದ್ಧಿಯಿದೆ ದಕ್ಷಪ್ರಜಾಪತಿಯ ಶಾಪಕ್ಕೊಳಗಾದ ಚಂದ್ರನು ಶಾಪ ನಿವೃತ್ತಿಗಾಗಿ ಈ ಪುಣ್ಯಕ್ಷೇತ್ರದಲ್ಲಿ ಪರಮೇಶ್ವರನನ್ನು ಕುರಿತು ತಪಸ್ಸನ್ನು ಆಚರಿಸಿದನು ಪರಮೇಶ್ವರನು ಪ್ರತ್ಯಕ್ಷನಾಗಿ ಶಾಪವಿಮೋಚನೆ ಗೊಳಿಸಿದನು ಈ ಸ್ಥಳವೇ ಚಂದ್ರಮೌಳೀಶ್ವರ ದೇವಾಲಯವೆಂದು ಪ್ರಸಿದ್ಧವಾಗಿದೆ ಇಲ್ಲಿ ಚಂದ್ರಪುಷ್ಕರಿಣಿ ತೀರ್ಥವೂ ಇದೆ ಶ್ರೀಮನ್ಮಧ್ವಾಚಾರ್ಯರು ಸನ್ಯಾಸ ಸ್ವೀಕಾರಮಾಡಿದ ಸಮಯದಲ್ಲಿ ತಾವು ಗಂಗಾಸ್ನಾನಕ್ಕೆ ಹೋಗಬೇಕೆಂದು ಅಪೇಕ್ಷಿಸಿದಾಗ ಅನಂತಾಸನನ ಅಪೇಕ್ಷೆಯಂತೆ ಗಂಗಾದೇವಿಯು ಈ ಸರೋವರದಲ್ಲಿ ಕಾಣಿಸಿಕೊಂಡಳು ಅಂದಿನಿಂದ ಅದಕ್ಕೆ ಮಧ್ವಸರೋವರವೆಂದು ಕರೆದರು ಹನ್ನೆರಡು ವರ್ಷಕ್ಕೊಮ್ಮೆ ಗಂಗೆಯು ಇಲ್ಲಿಗೆ ಎರು

ವಳೆಂದು ಸುಮಧ್ವವಿಜಯದಲ್ಲಿ ವರ್ಣಿಸಲಾಗಿದೆ ಹೀಗೆ ಉಡುಪಿಯಲ್ಲಿ ಶ್ರೀಕೃಷ್ಣನನ್ನು ಪ್ರತಿಷ್ಠಾಪಿಸಿ ಅಷ್ಟಮಠದ ಯತಿಗಳಿಂದ ನಿರಂತರವಾಗಿ ಪೂಜೆ ನಡೆಯುವಂತೆ ವ್ಯವಸ್ಥೆಮಾಡಿ ತಮ್ಮ ವಾಣಿ ಯಿಂದ ದುರ್ವಾದಿಗಳನ್ನು ಸೋಲಿಸಿ ಧರ್ಮಜಾ ಗೃತಿಯನ್ನು ಮಾಡಿದ ಶ್ರೀ ಪೂರ್ಣ ಪ್ರಜ್ಞರು ನಿತ್ಯಸ್ಮರಣೀಯರು ಇವರಿಂದ ಆದ ಧರ್ಮಜಾ ಗೃತಿಯನ್ನು ಯಾವ ಭಾರತೀಯನೂ ಮರೆಯು ವಂತಿಲ್ಲ

ಶ್ರೀ ಮನ್ಮಧ್ವಾಚಾರ್ಯರು ದ್ವೈಮತ ಪ್ರಚಾ ರಮಾಡುತ್ತಿರುವಾಗ ಅನೇಕಪಂಡಿತರು ಅವರೊ ಡನೆ ವಾದಮಾಡಿ ಸೋತು ಅವರ ಅನುಯಾ ಯಿಗಳಾದರು ಆಚಾರ್ಯರು ಬದರಿಕಾಶ್ರಮಕ್ಕೆ ಹೋಗಿ ವೇದವ್ಯಾಸರ ಸಂದರ್ಶನವಡೆದು ಭಾರ ತದ ಆದ್ಯಂತ ಮಧ್ವಮತ ಪ್ರಚಾರ ಮಾಡಿದರು ಅವರು ಬ್ರಹ್ಮಸೂತ್ರ ಉಪನಿಷತ್ತು ಗೀತೆಗಳಿಗೆ ಭಾಷ್ಯ ಭಾಗವತ ತಾತ್ಪರ್ಯ ಮಹಾಭಾರತ ತಾತ್ಪರ್ಯ ಮೊದಲಾದ ಪುರಾಣ ಪ್ರಸ್ಥಾನಗ್ರಂಥಗ ಳನ್ನು ಕೃಷ್ಣಾಮೃತ ಮಹಾಭಾವ ತಂತ್ರಸಾರವೆಂಬ ಆಗಮ ಪ್ರಸ್ಥಾನ ದ್ವಾದಶ ಸ್ತೋತ್ರಮೊದಲಾದ ಮುವತ್ತೇಳು ಗ್ರಂಥಗಳನ್ನು ರಚಿಸಿ ಸಿದ್ಧಾಂತವನ್ನು ನೆಲೆಗೊಳಿಸಿದರು ಈ ಗ್ರಂಥಗಳು ಆಚಾರ್ಯರ ಸರ್ವಮೂಲಗ್ರಂಥಗಳು ಎಂದು ಮಾನ್ಯವಾ ಗಿವೆ



ತ್ರಿವಿಕ್ರಮ ಪಂಡಿತಾಚಾರ್ಯರು ಶ್ರೀಮದಾಚಾ ರ್ಯರ ಹತ್ತಿರ ಹದಿನೈದು ದಿನ ಸತತವಾಗಿ ವಾದಮಾಡಿ ನಂತರ ಅವರ ಶಿಷ್ಯರಾದರು ಆಚಾ ರ್ಯರ ತಮ್ಮಂದಿರು ವಿರಕ್ತರಾಗಿ ಇವರನ್ನು ಮೊರೆಹೋಗಲು ಸನ್ಯಾಸಾಶ್ರಮ ನೀಡಿ ವಿಷ್ಣು ತೀರ್ಥನೆಂದು ನಾಮಕರಣ ಮಾಡಿದರು ಅನವ ರತ ಪಾಠಪ್ರವಚನ ಜಪತಪಾನುಷ್ಠಾನದಿಂದ ಆಚಾ ರ್ಯರ ಅನುಗ್ರಹಕ್ಕೆ ಪಾತ್ರರಾದರು ವಾಯುದೇ ವರ ಮೂರನೆಯ ಅವತಾರವೇ ಶ್ರೀ ಮಧ್ವಾಚಾ ರ್ಯರದು ಎಂದು ಹೇಳಿದ್ದಾರೆ ಇದಕ್ಕೆ ವೇದ ಪ್ರಮಾಣ ಸ್ಮೃತಿಗಳ ಆಧಾರವಿದೆ

ನಮಸ್ತೇ ಪ್ರಾಣೇಶ ಪ್ರಣತಾವಿಭವಾ ಯಾವ
ನಿಮಗಾ ನಮ ಸ್ವಾಮಿನೆ ರಾಮ ಪ್ರಿಯತಮ
ಹನುಮನ್ ಗುರುಗುಣ || ನಮಸ್ತುಭ್ಯಂ ಭೀಮ
ಪ್ರಬಲ ಕೃಷ್ಣೇಷ್ಟ ಭಗವನ್ ನಮ ಶ್ರೀಮನ್‌ಮ
ಧ್ವಪ್ರಧಿಕ ಸುಧ್ಯಕಂ ನೋ ಜಯ ಜಯ ||

ಮೊದಲನೆಯ ಅವತಾರದಲ್ಲಿ ಶ್ರೀರಾಮದೂತ ಹನುಮಂತನಾಗಿ ದ್ವಿತಿಯ ಅವತಾರದಲ್ಲಿ ಶ್ರೀಕೃಷ್ಣ ಭಕ್ತ ಭೀಮನಾಗಿ ಮೂರನೆಯ ಅವತಾ ರದಲ್ಲಿದ್ದ ಶ್ರೀಮನ್ ಮಧ್ವಾಚಾರ್ಯರಿಗೆ ಜಯ ವಾಗಲಿ ಎಂದು ಪ್ರಾರ್ಥಿಸಿದ್ದಾರೆ

ಶ್ರೀಮಧ್ವಾಚಾರ್ಯರು ಈ ಭೂಮಿಯಲ್ಲಿ ೭೯ ವರ್ಷ ಸಜ್ಜನರಿಗೆ ಉಪದೇಶಮಾಡುತ್ತ ವ್ಯಕ್ತರಾಗಿ ಇದ್ದು ಕ್ರಿಶ ೧೨೩೮ (ಕ್ರಿಶ) ೧೩೧೭ (ಪಿಂಗಳ ಸಂವತ್ಸರ) ಮಾಘ ಶುದ್ಧನವಮಿಯಂದು ಶ್ರೀಮ ದನಂತಾಸನದೇವರ ಎದುರು ಶಿಷ್ಯರಿಗೆ ಉಪ ದೇಶ ನೀಡುತ್ತಿರುವಾಗಲೆ ಅದೃಶ್ಯರಾಗಿ ಬದರಿಕಾ ಶ್ರಮಕ್ಕೆ ತೆರಳಿದರು ಅವರು ಒಂದಾಶದಲ್ಲಿ ಅನಂ ತಾಸನ ದೇವಾಲಯದಲ್ಲಿಯೂ ಒಂದು ಅಂಶ ದಿಂದ ಶ್ರೀಕೃಷ್ಣ ಮಠದ ಸಿಂಹಾಸನದಲ್ಲಿಯೂ ಪರ್ಯಾಯ ಶ್ರೀಪಾದಂಗಳಲ್ಲಿಯೂ ಸನ್ನಿಹಿತವಾ ಗಿದ್ದಾರೆಂದು ಭಕ್ತರು ಭಾವಿಸಿದ್ದಾರೆ ಮಧ್ವಗುರವೇ ನಮ

ಮೋಕ್ಷದಾಯಕವಾದ
ರೌಪ್ಯಪೀಠಂ ಕುಮಾರಾದ್ರಿ
ಕುಂಭಾಸೀಚ ಕೋಟೇಶ್ವರ |
ಕ್ರೋಢ ಗೋಕರ್ಣ ಮೂಕಾಂಬಾ
ಸಪ್ತೈತೇ ಮೋಕ್ಷದಾಯಕಾ ||

ಕನ್ನಡ ಜಿಲ್ಲೆಗಳಲ್ಲಿ ಇರುವ ಉಡುಪಿ ಸುಬ್ರ ಹ್ಮಣ್ಯ ಕುಂಭಾಸಿ ಕೋಟೇಶ್ವರ ಕ್ರೋಢನಾರಾ ಯಣ ಗೋಕರ್ಣ ಮೂಕಾಂಬಿಕೆಗಳೆಂಬ ಏಳು ಕ್ಷೇತ್ರಗಳು ಪ್ರಸಿದ್ಧವಾದವುಗಳು *

# ಶ್ರೀಗೋಪಾಲದಾಸರು

ಸುಶೀಲಾ ರಂಗನಾಥರಾವ್

ದಾಸಚತುಷ್ಟಯದಲ್ಲಿ ಮೂರನೆಯವರಾದ ಶ್ರೀ ಗೋಪಾಲದಾಸರ ಆರಾಧನೆಯು ಪುಷ್ಯ ಬಹುಳ ಅಷ್ಟಮಿಯಂದು ಬರುತ್ತದೆ ಇವರು ಶ್ರೀ ಗಣೇಶಾಂಶಸಂಭೂತರು ಇವರು ಶ್ರೀ ವಿಜಯದಾಸರ ಶಿಷ್ಯರು ಇವರು ಬೇಕಾದಷ್ಟು ಸುಳಾದಿಗಳನ್ನು ದೇವರ ನಾಮಗಳನ್ನು ಮಾಡಿರುತ್ತಾರೆ ಇವರ ಒಂದೊಂದು ಮಹಿಮೆಯೂ ಮೈರೋಮಾಂಚನವನ್ನುಂಟುಮಾಡುವುದು

ಗೋಪಾಲದಾಸರು ಎಲ್ಲಾ ತೀರ್ಥಕ್ಷೇತ್ರ ದರ್ಶನ ಮಾಡಿದ್ದರು ಆದರೆ ಪಂಢರಪುರಿಗೆ ಹೋಗಿ ಶ್ರೀಪಾಂಡುರಂಗನ ದರ್ಶನ ಮಾತ್ರ ಮಾಡಿರಲಿಲ್ಲ ಒಂದು ಪ್ರಾತಃಕಾಲ ತುಲಸಿಯನ್ನು ಬಿಡಿಸಲು ಅಡವಿಗೆ ಹೋದರು ಒಬ್ಬ ಕುದುರೇ ಸವಾರನು ಇವರನ್ನೇ ಅನುಸರಿಸಿ ಎಂದನು ದಾಸರು ಓಡತೊಡಗಿದರು ಅವರು ಓಡಿದಷ್ಟೂ ಅವರನ್ನೇ ಅಟ್ಟಿಸಿಕೊಂಡು ಬಂದನು ಕಡೆಗೆ ದಾಸರು ಏನಾದರೂ ಮಾಡು ಎಂದು ನಿಂತುಬಿಟ್ಟರು ರಾವುತನ ದಾಸರನ್ನು ಆಲೇ ಸಾಹಿ ಎಂದು ಮರಾಠಿಯಲ್ಲಿ ಕೇಳಿ ಮಾಯವಾಗಿಬಿಟ್ಟನು ಆಗ ಅವರು ಎಚ್ಚೆತ್ತು ನೀಲಿಕುದುರೆಯನ್ನೇರಿ ಎಂಬ ಸುಳಾದಿಯನ್ನು ರಚಿಸಿದರು ಅವರು ತಮ್ಮಂದಿರೊಡಗೂಡಿ ಪಂಢರಪುರಕ್ಕೆ ಹೋಗಿ ಶ್ರೀ ಪಾಂಡುರಂಗನ ದರ್ಶನ ಮಾಡಿದರು

ಇವರ ಎಲ್ಲಾ ಮಹಿಮೆಗಳನ್ನು ವರ್ಣಿಸಲು ಸಾಧ್ಯವಿಲ್ಲ ಇವರ ಒಂದೇ ಒಂದು ಮಹತ್ತರವಾದ ಮಹಿಮೆ ಎಂದರೆ ಶ್ರೀ ಜಗನ್ನಾಥದಾಸರಿಗೆ ೪೦ ವರ್ಷ ಆಯುರ್ದಾನ ಮಾಡಿದ ವಿಷಯ ಎಲ್ಲವನ್ನು ದಾನ ಮಾಡಬಹುದು ಆದರೆ ತಮ್ಮ ಆಯಸ್ಸಿನಲ್ಲಿ ಇನ್ನೊಬ್ಬರಿಗೆ ಹಂಚಿ ತಾವು ಅಲ್ಪಾಯುಷ್ಯರಾಗುವುದು ಹರಿದಾಸರಿಗೆ ಮಾತ್ರ ಸಾಧ್ಯ

ಶ್ರೀ ಜಗನಾಥದಾಸರ ಮುಂಚಿನ ಹೆಸರು ಶ್ರೀನಿವಾಸಾಚಾರ್ಯರೆಂದಾಗಿತ್ತು ಇವರು ಮಹಾಪಂಡಿತರಾಗಿದ್ದರು ಬೇಕಾದಷ್ಟು ಜನ ಶಿಷ್ಯರನ್ನು ತಯಾರುಮಾಡಿದ್ದರು ಇವರು ಕನ್ನಡ ಭಾಷೆಯಲ್ಲಿ ಮಾತನಾಡಿದರೆ ಮೈಲಿಗೆಯೆಂದು ತಿಳಿದಿದ್ದರು ಜನಗಳ ದೃಷ್ಟಿಯಲ್ಲಿ ಇವರು ಬಹಳ ದೊಡ್ಡ ಪಂಡಿತರಾಗಿದ್ದರು

ಶ್ರೀನಿವಾಸಾಚಾರ್ಯರಿಗೆ ಹರಿದಾಸರೆಂದರೆ ಆಗುತ್ತಿರಲಿಲ್ಲ ಕನ್ನಡ ದೇವರನಾಮಗಳೆಂದರೆ ಬಹಳ ಅಸಡ್ಡೆ ಆ ಕಾಲದಲ್ಲಿ ವಿಜಯದಾಸರು ಗೋಪಾಲದಾಸರು ಕಲ್ಲೂರು ಸುಬ್ಬಣ್ಣದಾಸರು ವ್ಯಾಸತತ್ವಜ್ಞರು ಮಹಾ ಪ್ರಖ್ಯಾತರೆನಿಸಿ ಅಪರೋಕ್ಷಜ್ಞಾನಿಗಳೆಂದು ಜನಗಳ ಪೂಜ್ಯತೆಯನ್ನು ಪಡೆದಿದ್ದರು ವಿಜಯದಾಸರನ್ನು ಶ್ರೀನಿವಾಸಾಚಾರ್ಯರು ನಿಂದಿಸುತ್ತಿದ್ದರು ಆದರೆ ಮಹಾ ಕರುಣಾಳುಗಳಾದ ಶ್ರೀ ವಿಜಯದಾಸರು ಶ್ರೀನಿವಾಸಾಚಾರ್ಯರನ್ನು ಉದ್ಧರಿಸಬೇಕೆಂದು ಮಾನವಿಗೆ ಎಂದರು

ದಾಸರು ಪ್ರತಿದಿನದಂತೆ ತಮ್ಮ ಸ್ನಾನಾಹ್ನೀಕಗಳನ್ನು ತೀರಿಸಿಕೊಂಡು ತಂಬೂರಿಯನ್ನು ಹಿಡಿದು ಭಜನೆಮಾಡುತ್ತಾ ಯಾಯವಾರಕ್ಕೆ ಹೊರಟರು ಪ್ರತಿಮನೆಯ ಬಾಗಿಲಲ್ಲಿ ನಿಂತು ತೀರ್ಥಪ್ರಸಾದಕ್ಕೆ ಬರಬೇಕೆಂದು ಆಹ್ವಾನಕೊಡುತ್ತಿದ್ದರು ಶ್ರೀನಿವಾಸಾಚಾರ್ಯರ ಮನೆಬಾಗಿಲಿಗೆ ಬಂದರು ಆದರೆ ಶ್ರೀನಿವಾಸಾಚಾರ್ಯರು ಭಜನೆ ಧ್ವನಿಕೇಳಿದರೂ ಕೂಡ ಹೊರಗೆ ಬರಲಿಲ್ಲ ದಾಸರೇ ಒಳಗೆ ಹೋಗಿ ತೀರ್ಥಪ್ರಸಾದಕ್ಕೆ ಬನ್ನಿ ಎಂದು ಕರೆದು ಹೋದರು



ದಾಸರ ಬಿಡಾರದಲ್ಲಿ ಪೂಜೆ ನೈವೇದ್ಯಗಳಾದವು ಆಚಾರ್ಯರು ಏಕೆ ಬರಲಿಲ್ಲ ಕರೆದು ಬಾರೆಂದು ಒಬ್ಬ ಶಿಷ್ಯನನ್ನು ಕಳುಹಿಸಿದರು ಆಚಾರ್ಯರಿಗೆ ದಾಸರ ನೈವೇದ್ಯ ಮಾಡುವುದು ಇಷ್ಟವಿರಲಿಲ್ಲ ಆದ್ದರಿಂದ ಊಟಹೊತ್ತಾದರೆ ಉದರ ಶೂಲೆ ಬರುವುದೆಂದು ಹೇಳಿಕಳುಹಿಸಿಬಿಟ್ಟರು ದಾಸರು ಹಾಗೆಯೇ ಆಗಲೆಂದು ಹೇಳಿಬಿಟ್ಟರು

ಸ್ವೋತ್ತಮದ್ರೋಹ ಮಹಾ ಕೆಟ್ಟದ್ದು ಶ್ರೀಹರಿಯು ತನಗೆ ಅಪರಾಧಮಾಡಿದರೆ ಸಹಿಸಿಕೊಳ್ಳುತ್ತಾನೆ ಆದರೆ ತನ್ನ ಭಕ್ತರಿಗೆ ಯಾರಾದರೂ ಅಪಚಾರಮಾಡಿದರೆ ಸಹಿಸಿಕೊಳ್ಳುವುದಿಲ್ಲ ಶ್ರೀ ವಿಜಯದಾಸರಿಗೆ ಶ್ರೀನಿವಾಸಾಚಾರ್ಯರು ನುಡಿದ ಅನುಚಿತದಿಂದ ಅವರಿಗೆ ಉದರಶೂಲೆ ಪ್ರಾರಂಭವಾಗಿಯೇ ಹೋಯಿತು ದಿನ ದಿನಕ್ಕೆ ಹೆಚ್ಚಾಗುತ್ತಾ ಹೋಯಿತು ತಿರುಪತಿಗೆ ಶ್ರೀ ಶ್ರೀನಿವಾಸನ ಸೇವೆ ಮಾಡಿದರು ಅದರಿಂದ ಇವರಿಗೆ ಏನೂ ಕಡಿಮೆಯಾಗಲಿಲ್ಲ ಇವರು ವಿಜಯದಾಸರನ್ನು ನಿಂದಿಸಿದುದರಿಂದ ಅವರಿಂದಲೇ ಇವರ ರೋಗ ವಾಸಿಯಾಗಬೇಕೆಂದು ಶ್ರೀಹರಿ ಸಂಕಲ್ಪ ತಿರುಪತಿಯಿಂದ ಮುಂದೆ ಘಟಿಕಾಚಲಕ್ಕೆ ಬಂದು ಶ್ರೀ ಪ್ರಾಣದೇವರ ಸೇವೆ ಮಾಡಿದರು ಆದರೆ ಅಲ್ಲಿಯೂ ಏನೂ ಫಲ ಕಾಣಲಿಲ್ಲ ನಂತರ ಕಾಮಧೇನು ಕಲ್ಪವೃಕ್ಷವೆನಿಸಿದ ಶ್ರೀ ರಾಘವೇಂದ್ರಸ್ವಾಮಿಗಳ ಸೇವೆ ಮಾಡಬೇಕೆಂದು ಮಂತ್ರಾಲಯಕ್ಕೆ ಬಂದರು

ಮಂತ್ರಾಲಯದಲ್ಲಿ ಶ್ರೀರಾಯರಸೇವೆಮಾಡಲು ತೊಡಗಿದರು ಕಠಿಣಸೇವೆ ಮಾಡುತ್ತೇನೆ ವಾಸಿಯಾಗದಿದ್ದರೆ ಪ್ರಾಣತ್ಯಾಗ ಮಾಡುವೆನೆಂದು ಸಂಕಲ್ಪಮಾಡಿದರು ರಾತ್ರಿ ಸ್ವಪ್ನದಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳು ಅಪ್ಪಣೆ ಕೊಡಿಸಿದರು "ನೀನು ವಿಜಯದಾಸರಿಗೆ ದ್ರೋಹ ಮಾಡಿದ್ದರಿಂದ ನಿನಗೆ

ಹೀಗಾಗಿದೆ ಶ್ರೀ ವಿಜಯದಾಸರೆಂದರೆ ಭೃಗುಮು ನಿಗಳೇ ಅವರ ನೈವೇದ್ಯವನ್ನು ನೀನು ನಿರಾ ಕರಿಸಿದ್ದರಿಂದ ನಿನಗೆ ಈ ರೋಗ ಪ್ರಾಪ್ತವಾಗಿದೆ ನೀನು ಈಗಲೇ ಹೋಗಿ ಅವರಿಗೆ ಶರಣಾಗತನಾ ದರೆ ನಿನಗೆ ಮಂಗಳವಾಗುವುದೆಂದು ಮಂತ್ರಾಕ್ಷತ ಕೊಟ್ಟರು ಎಚ್ಚರವಾದಾಗ ಕೈಯಲ್ಲಿ ಮಂತ್ರಾಕ್ಷತೆ ಇತ್ತು

ಬೆಳಗ್ಗೆ ಬೇಗ ಎದ್ದು ಹೆಂಡತಿ ಮಗನ ಸಹಾಯ ದಿದ ರಾಯರ ದರ್ಶನಮಾಡಿ ಪಾದೋದಕ ತೆಗೆ ದುಕೊಂಡು ಚೀಕಲಿಪರವಿಗೆ ಬಂದರು ಅಲ್ಲಿ ಶ್ರೀ ವಿಜಯದಾಸರು ಪ್ರದಕ್ಷಿಣೆ ಮಾಡುತ್ತಿದ್ದುದು ಕಾಣಿ ಸಿತು ಉದ್ದಕ್ಕೆ ನಮಸ್ಕಾರ ಮಾಡಿದರು ವಿಜ ಯದಾಸರು ಇವರ ಮೈದಡವಿ ನಿಮ್ಮ ಸ್ವರೂ ಪಗುರುಗಳು ಶ್ರೀ ಗೋಪಾಲದಾಸರು ನೀವು ಅವರಲ್ಲಿಗೇ ಹೋಗಿ" ಎಂದು ಕಳುಹಿಸಿದರು

ಶ್ರೀ ಗೋಪಾಲದಾಸರು ಇವರನ್ನು ಎದುರು ಗೊಂಡು ಕರೆದುಕೊಂಡು ಹೋದರು ಇವರಿಗೆ ಎರಡು ಭಕ್ಕರಿಯನ್ನು ದೇವರಿಗೆ ನಿವೇದನ ಮಾಡಿ ಕೊಟ್ಟರು ಗೋಪಾಲದಾಸರು ತಮ್ಮ ಜೊತೆಯಲ್ಲಿ ಇವರನ್ನು ತಿರುಪತಿಗೆ ಕರೆದುಕೊಂಡು ಹೋದರು ದಾಸರಿಗೆ ಆಯಾಸದಿಂದ ಶ್ವಾಸೋಚ್ವಾಸ ನಿಂತು ಹೋಯಿತು ಅಪ್ಪರಲ್ಲಿ ಶ್ರೀ ಗೋಪಾಲದಾಸ ರಿಗೆ ಶ್ರೀ ವಿಜಯದಾಸರು ನಿನ್ನ ಆಯಸ್ಸಿನಲ್ಲಿ 40 ವರ್ಷ ಆಯಸ್ಸು ದಾನಮಾಡು ಎಂದು ಅಪ್ಪಣೆ ಕೊಡಿಎದರು ಆಗ ಶ್ರೀ ಗೋಪಾಲದಾಸರು ಧನ್ವಂತರೀ ಮೂರ್ತಿ ಪರಮಾತ್ಮನನ್ನು ಕೆಳಗಿನ ದೇವರನಾಮದಿಂದ ಸ್ತುತಿಸಿದರು

ಎನ್ನ ಬಿನ್ನಪಕೇಳೊ ಧನ್ವಂತ್ರಿ ದಯಮಾಡೊ
ನಣ್ಣವನು ಇವ ಕೇವಲ || ಪ ||

ಬನ್ನ ಬಡಿಸುವರೋಗವನ್ನು
ಮೋಚನೆ ಮಾಡಿ
ಚನ್ನಾಗಿ ಪಾಲಿಸುವುದೋ ಕರುಣೆ ||ಅ ಪ||

ಆರೋಗ್ಯ ಆಯುಸ್ಸು ಐಶ್ವರ್ಯವೆಂಬ ಈ
ಮೂರು ವಿಧ ವಸ್ತುಕಗಳು
ನಾರಾಯಣ ಭಜಕರಾದವರ ಸಾಧನಕೆ
ಪೂರಣನಾಗಿಪ್ಪವೋ ||
ಘೋರ ವ್ಯಭಿಚಾರ ಪರನಿಂದೆ ಪರವಿತ್ತಾಪ
ಹಾರ ಮಾಡಿದ ದೋಷದಿ
ದಾರಿದ್ರ ಕಾಣುವರು ಮೂರು ವಿಧದಿಂದಲೇ
ಕಾರಣನು ನೀನೆ ದುಷ್ಕರ್ಮ ಪರಿಹರಿಸೋ ||

ಏಸುಮತಿಯ ಮೇಲಿನ್ನು ಅಸುರಜನರೇ
ಬಹಳ
ವಶವಲ್ಲ ಕಲಿಯ ಬಾಧೆ
ಬಿಎಲಿಂದ ಪೀಡಿತವಾದ ಸಸಿಗಳಂತೆ
ಶಿಶುಗಳು ಸಾವಿಪ್ಪೆವೊ
ಅಸುರಾರಿ ನಿನ್ನ ಕರುಣಾಮೃತದ ಮಳೆಗರೆದು
ಕುಶಲದಲ ಪಾಲಿಸುವುದು
ಕೆಸರಿಂದ ಕೆಸರು ತೊಳೆದಂತೆ ಕರ್ಮದ
ಫಲವು
ಅಸುನಾಥ ಹರಿಯೆ ಸಲಹೋ ಸ್ವಾಮಿ ||

ಅನ್ಯರನು ಭಜಿಸದಲೆ ನಿನ್ನನೇ ಸ್ಮರಿಸುತ್ತ
ನಿನ್ನ ಚಿಹ್ನಗಳನ್ನೆ ಧರಿಸಿ
ನಿನ್ನ ನಾಮೋಚ್ಚರಿಸಿ ನಿನ್ನ ಪರವನೆನಿಸಿ
ನಿನ್ನಿಂದ ಉಪಜೀವಿಸಿ
ಅನ್ನ ಆರೋಗ್ಯ ಅಲ್ಪವು ಆಗೆ ಅನ್ಯರಿಗೆ
ಇನ್ನು ಅಲ್ಪರಿಯವೇಕೆ
ನಿನ್ನ ಸಂಕಲ್ಪ ಭಕುತರನ್ನು ಪೋಷಿಪೆನೆಂದು
ಘನ್ನ ಬಿರುದನ್ನು ಉಳುಹೋ ಸ್ವಾಮಿ||

ಆಧಿವ್ಯಾಧಿಗಳು ಉನ್ಮಾದ ವಿಭ್ರಮ ನಾನಾ
ಬಾಧೆಗೌಷಧವು ನೀನೆ
ಈ ದಾನ ನಿನ್ನ ಕರಕಮಲದಿ ಸುಧೆಗರೆದು
ಸಾಧುಗಳ ಪಾಲಿಸುವೆ ನೀ
ಮೋದಪಡಿಸುವೆ ನಿನ್ನ ಸಾಧಿಸುವವರಿಗೆ ಶು
ಭೋದಯಂಗಳ ನೀಡಿ
ಆದರಿಸಿ ಅವಗೆ ತವಪಾದ ಧ್ಯಾನವನಿತ್ತು
ಸಾಧುಗಳೊಳಗಿರಿಸಿ ಮೋದ ಕೊಡು ಸರ್ವದಾ

ನಿನ್ನವರಲಿ ಇವಗೆ ಇನ್ನು ರತಿಯನೆ ಕೊಡೋ
ನಿನ್ನವನೆಂದು ಅರಿತು
ನಿನ್ನ ಪ್ರಾರ್ಥಿಸುವೆ ನಾನನ್ಯರಿಗೆ ಅಲ್ಪರಿಯೆ
ಎನ್ನ ಪಾಲಿಸುವ ಧೊರೆಯೇ
ಎನ್ನ ಮಾತಲ್ಲ ಇದು ಎನ್ನ ಹಿರಿಯರ ಮಾತು
ಮನ್ನಿಸಬೇಕು ಕರುಣೆ
ಅನ್ನಂತ ಗುಣಪೂರ್ಣ ಗೋಪಾಲವಿಠಲ
ಇನ್ನಿದನೆ ಪಾಲಿಸುವುದೋ (ಕರುಣೆ) ಪ್ರಭುವೇ

ಹೀಗೆಂದು ಸ್ತೋತ್ರಮಾಡಿ ತಮ್ಮ ಆಯುಸ್ಸಿನಲ್ಲಿ 40 ವರ್ಷಗಳನ್ನು ಶ್ರೀನಿವಾಸಾಚಾರ್ಯರಿಗೆ ಧಾರೆ ಯೆರೆದರು ಎನ್ನ ಮಾತಲ್ಲ ಇದು ಎನ್ನ ಹಿರಿ ಯರ ಮಾತು ಎನ್ನುವ ಸಾಲಿನಿಂದ ನಮಗೆ ಶ್ರೀ ಗೋಪಾಲದಾಸರು ಶ್ರೀ ವಿಜಯದಾಸರ ಮಾತಿ ನಂತೆ ಆಯುರ್ದಾನ ಮಾಡಿರುವುದು ಗೊತ್ತಾಗು ತ್ತದೆ ಶ್ರೀ ಜಗನ್ನಾಥದಾಸರು ತಮ್ಮ ಒಂದು ದೇವರನಾಮದಲ್ಲಿ ಗೋಪಾಲದಾಸರಾಯ ಅಪ ಮೃತ್ಯುವನು ತರಿದೆ ಎನ್ನೊಳಗಿದ್ದ ಅಪರಾಧಂಗಳ ಮರೆದೆ ಎಂದು ಶ್ರೀ ಗೋಪಾಲದಾಸರನ್ನು ಕೊಂಡಾಡಿದ್ದಾರೆ

ಶ್ರೀ ಗೋಪಾಲದಾಸರು ಆಯುರ್ದಾನ ಮಾಡಿ ದ್ದರಿಂದು ಮೇರುಕೃತಿಯಾದ ಶ್ರೀ ಹರಿಕಥಾಮೃತ ಸಾರದಂಥ ಗ್ರಂಥ ಜಗನ್ನಾಥದಾಸರಿಂದ ನಮಗೆ ದೊರೆಯಿತು

ಇಂದಿಗೂ ಉತ್ತನೂರಿನಲ್ಲಿ ಶ್ರೀ ಗೋಪಾಲದಾ ಸರ ಆರಾಧನೆ ಪುಷ್ಯ ಬಹುಳ ಸಪ್ತಮಿ ಅಷ್ಟಮಿ, ನವಮಿ ಬಹಳ ವೈಭವದಿಂದ ನಡೆಯುತ್ತದೆ

# ಮಹಾಶಿವರಾತ್ರಿ

**ವಿದ್ವಾನ್ ವಿ ಎನ್ ಭಟ್ಟ**

ಶಿವ ಶಿವ ಎಂದರೆ ಸಿಡಿಲೆಲ್ಲ ಎಯಲಾಗಿ
ಕಲ್ಲು ಬಂದೆರಗಿ ಕಡೆಗಾಗಿ ಎಲೆ ಮನವೆ
ಶಿವನೆಂಬ ಶಬುದ ಬಿಡವೇಡ

ಎಂಬಂತೆ ಶಿವಧ್ಯಾನ ನಿರತರಾಗಿದ್ದರೆ ಯಾವ ವಿವತ್ತೂ ಬರಲಾರದು ಮಾವ ಬಹುಳ ಚತುರ್ದಶಿ ಶಿವರಾತ್ರಿ ಅದು ವ್ರವಂಚಕ್ಕೆ ತಂದೆಯೆನಿಸಿದ ಶಿವನ ಆರಾಧನೆಗೆ ವ್ರಶಸ್ತ ಮುಹೂರ್ತ

ಮಾವಕೃಷ್ಣ ಚತುರ್ದಶ್ಯಾಂ
ಆದಿದೇವೋ ಮಹಾನಿಶಿ
ಶಿವಲಿಂಗ ತಯೋದ್ಭೂತ
ಕೋಟಿ ನೂರ್ಯ ನಮವ್ರಭ
ತತ್ಕಾಲವ್ಯಾಪಿನೀ ಗ್ರಾಹ್ಯಾ
ಶಿವರಾತ್ರಿ ವ್ರತೇ ತಿಥಿ

ಎಂಬ ಈಶಾನ ನಂಹಿತೆಯ ವಾಕ್ಯದಂತೆ ಮಹಾಶಿವರಾತ್ರಿಯಂದು ನಡುರಾತ್ರಿ ಕೋಟಿ ನೂರ್ಯವ್ರಕಾಶನಾದ ವರಶಿವನು ಶಿವಲಿಂಗದಿಂದ ಸ್ವಯಂಭುವಾಗಿ ಉದ್ಭವಿಸಿದನೆಂದು ತಿಳಿದುಬರುತ್ತದೆ ಇದಲ್ಲದೆ ಶಿವರಾತ್ರಿ ಶಿವನು ಹಾಲಾಹಲ ವಿಷ ಕುಡಿದ ದಿನವೆಂತಲೂ ತಾಂಡವ ನೃತ್ಯ ಮಾಡಿದ ದಿನವೆಂತಲೂ ಹೇಳುತ್ತಾರೆ ಇಂದು ಶಿವಾಲಯಗಳಲ್ಲಿ ದ್ವಾದಶ ಜ್ಯೋತಿರ್ಲಿಂಗಕ್ಷೇತ್ರಗಳಲ್ಲಿ ಗೋಕರ್ಣ ಯಾಣ ಕಾಶಿ ರಾಮೇಶ್ವರ ಮುಂತಾದ ತೀರ್ಥಕ್ಷೇತ್ರಗಳಲ್ಲಿ ಲಕ್ಷ- ಲಕ್ಷ ಜನರು ಪೂಜೆ ಪುರಸ್ಕಾರ ಮಗ್ನರಾಗಿರುತ್ತಾರೆ ವ್ರಸಿದ್ಧವಾದ ಹುಬ್ಬಳ್ಳಿಯ ಸಿದ್ಧಾರೂಢ ಜಾತ್ರೆ ಗೋಕರ್ಣ- ಮಹಾಬಲೇಶ್ವರ ಜಾತ್ರೆ ಇಂದೇ ನಡೆಯುತ್ತದೆ

## ಶಿವರಾತ್ರಿ ಆಚರಣೆಯ ವಿಧಾನ

ಈ ದಿನ ಅರುಣೋದಯಕ್ಕೆ ಎದ್ದು ಸ್ನಾನ ಮಾಡಿ (ನದಿ ಸಮುದ್ರ ಸಂಗಮಸ್ನಾನ ಅತಿಶ್ರೇಷ್ಠವಾದುದು) ಶುಭ್ರ ವಸ್ತ್ರವನ್ನುಟ್ಟು ಸಮಸ್ತ ವಾವ ನಿವಾರಣೆಗಾಗಿಯೂ, ಜ್ಞಾನ ಮೋಕ್ಷಪ್ರಾಪ್ತಿಗಾಗಿಯೂ ಶಿವರಾತ್ರಿ ವ್ರತ ಆಚರಿಸುತ್ತೇವೆ ಎಂದು ಸಂಕಲ್ಪ ಮಾಡಬೇಕು ತ್ರಯೋದಶಿಯಂದು ಒಪ್ಪತ್ತು ಊಟ ಚತುರ್ದಶಿ ಪೂರ್ಣ ನಿರಾಹಾರವಾಗಿದ್ದು ಅಮಾವಾಸ್ಯೆಯಂದು ಪಾರಣೆ ಮಾಡಬೇಕು ತೀರಾ ಅಸಮರ್ಥರಾಗಿದ್ದರೆ ಕ್ಷೀರಾಹಾರ ಅಥವಾ ಫಲಾಹಾರ ಸ್ವೀಕರಿಸಬಹುದು ಪ್ರದೋಷಕಾಲಕ್ಕೆ ಶಿವಾಲಯಕ್ಕೆ ಹೋಗಿ ರಾತ್ರಿ ನಾಲ್ಕು ಯಾಮಗಳಲ್ಲಿ ರುದ್ರಾಭಿಷೇಕ ಪೂಜೆ ಹರಿಕಥೆ ಸತ್ಸಂಗಾದಿಗಳಲ್ಲಿ ಮಗ್ನರಾಗಬೇಕು ಕೊನೆಯಲ್ಲಿ

ಬದ್ಧೋಹಂ ವಿವಿಧೈ ಪಾಪೈ
ಸಂಸಾರ ಭವಬಂಧನೇ
ಪತಿತಂ ಮೋಹಜಾಲೇ ಮಾಂ
ತ್ವಂ ಸಮುದ್ಧರ ಶಂಕರ

-ಎಂದರೆ ನಾನಾ ವಿಧವಾದ ಪಾಪಕರ್ಮಗಳಿಂದ ಭವ-ಬಂಧನದಲ್ಲಿ ಸಿಲುಕಿದ ನನ್ನನ್ನು ಲೋಕಕ್ಕೇ ಸುಖವನ್ನು ಕೊಡುವ ಸ್ವಾಮಿಯಾದ ನೀನು ಉದ್ಧರಿಸು -ಎಂದು ಬೇಡಿಕೊಳ್ಳಬೇಕು

## ಶಿವಪೂಜೆಗೆ ಜಾತಿ-ಮತ, ಸ್ತ್ರೀ-ಪುರುಷ ಬೇದವಿಲ್ಲ

ಈಶಾನಸಂಹಿತೆಯಲ್ಲಿ

ಶಿವರಾತ್ರಿ ವ್ರತಂ ನಾಮ
ಸರ್ವಪಾಪ ಪ್ರಣಾಶನಂ|
ಆ ಚಂಡಾಲ ಮನುಷ್ಯಾಣಾಂ
ಭುಕ್ತಿ-ಮುಕ್ತಿ ಪ್ರದಾಯಕಂ ||

-ಎಂದಿದೆ ಅಂದರೆ ಸರ್ವಪಾಪವನ್ನು ದೂರ ಮಾಡುವ ಈ ವ್ರತವನ್ನು ಚಾಂಡಾಲರಾದಿಯಾಗಿ





ಹಸಿರಿದ್ದರೆ ಉಸಿರು
ಹಸಿರಿದ್ದರೆ ಉಣಿಸು
ಹಸಿರಿದ್ದರೆ ಸೀರು

**ವೃಕ್ಷೋ ರಕ್ಷತಿ ರಕ್ಷಿತಃ**

ಗಿಡಗಳನ್ನು ಕಾಪಾಡಿರಿ
ಮಾನವ ಪರಿಸರವನ್ನು
ಕಾಪಾಡಿದಂತಾಗುತ್ತದೆ

ಯಾರೂ ಮಾಡಿದರೂ ಇಹದಲ್ಲಿ ಸುಖ ಪರದಲ್ಲಿ - ಮೋಕ್ಷ ಕಟ್ಟಿಟ್ಟ ಬುತ್ತಿ ವೇಡರ ಕಣ್ಣಪ್ಪನಂತಹ ನಿಷ್ಠಾವಂತ ಭಕ್ತ ನಿಷ್ಠೆಯಿಂದ ಶಿವನನ್ನು ಪೂಜಿಸಿ ಸದ್ಗತಿ ಪಡೆದ ಕಥೆ ಜನ-ಜನಿತ ವತನದಲ್ಲಿ ನಾಮಾಮೃತ ತುಂಬಿ ನಯನದಲ್ಲಿ ಮೂರುತಿ ತುಂಬಿ ಮನದಲ್ಲಿ ನಿಮ್ಮ ನೆನಹು ತುಂಬಿ ಕಿವಿಯಲ್ಲಿ ಕೀರುತಿ ತುಂಬಿ ಕೂಡಲ ಸಂಗಮ ದೇವಾ ನಿಮ್ಮ ಚರಣಕಮಲದೊಳ ಗಾನು ತುಂಬಿ ಎಂದಂತೆ ಅನನ್ಯ ಭಕ್ತಿಯಿಂದ ಧ್ಯಾನಿಸಿ ಜಾಗರಣೆ ಉಪವಾಸ ಅರ್ಚನೆ ಅಭಿಷೇಕ ಶಿವಸಂಕೀರ್ತನಾದಿಗಳ ಮೂಲಕ ಶಿವರಾತ್ರಿಯನ್ನು ಕಳೆಯಬೇಕು ಸಕಲ ಸೌಲಭ್ಯಗಳಿಗೂ ಶಿವನ ಕೃಪೆಯೇ ಕಾರಣ ಎಂದು ನಮ್ಮ ಹೆಣ್ಣು ಮಕ್ಕಳ ನಂಬಿಕೆ ಜಾನಪದದ ಈ ಮಾತು ಸ್ಮರಣೀಯ—

ಮುತ್ತಿನ ಮೂಗುತಿ ಮುತ್ತಾ ಮಾಡಿಲ ಕೊಟ್ಟ
ಮುತ್ತೈದಿತನವ ಶಿವಕೊಟ್ಟ ಮೇಲಿರುವ
ಮುಕ್ಕಣ್ಣ ಕೊಟ್ಟ ಮಕ್ಕಳನ

ಅವರಿಗೆ ಶಿವಪಾರ್ವತಿ - ತಂದೆ-ತಾಯಿಗಳಿದ್ದಂತೆ

ಹರನು ನಮ್ಮ ತಂದೆ ಗಿರಿಜೆ ನಮ್ಮ ತಾಯಿ
ಶರಣರು ನಮ್ಮ ಬಳಗ ಕೈಲಾಸದ-
ಗಿರಿ ಕಾಣೆ ನಮ್ಮ ತವರೂರು

ತವರೂರು ಮರೆಯಲು ಹೆಣ್ಣಿಗೆ ಹೇಗೆ ತಾನೇ ಸಾಧ್ಯ?

ಅಭಿಷೇಕ ಪ್ರಿಯೋ ಶಿವ- ಶಿವನು ಅಭಿಷೇಕ ಪ್ರಿಯ ಅಭಿಷೇಕದಿಂದ ತುಷ್ಟಿ ಪಡಿಸಿದಾಗ ಆ ಪಶುಪತಿ ನಮ್ಮಲ್ಲಿರುವ ಪಶುತ್ವವನ್ನು ದೂರ ಮಾಡುತ್ತಾನೆ ಭಕ್ತನು ನೀಡಿದ ಅಲ್ಪವನ್ನು ಕಲ್ಪವೆಂದು ಭಾವಿಸಿ ಧಾನಿಸುವ ದೇವದೇವ ಮಹಾದೇವನೊಬ್ಬನೇ ಸರಿ ಕವಿ ನೀಲಕಂಠ ದೀಕ್ಷಿತನು ಸೊಗಸಾಗಿ ಒಂದು ಮಾತು ಹೇಳಿದ್ದಾನೆ ಹಿಂದೆ ಸಮುದ್ರಮಥನದಲ್ಲಿ ಕಾಮಧೇನು ಕಲ್ಪವೃಕ್ಷ ಕೌಸ್ತುಭಮಣಿ ಅಪ್ಸರೆಯರು ಅಮೃತ ಮುಂತಾದವು ಹುಟ್ಟಿದಾಗ ತನಗೆ-ತನಗೆ ಎಂದು ಸಾಮಾನ್ಯ ಮನುಷ್ಯರಂತೆ ದೇವತೆಗಳೂ ಕಚ್ಚಾಡಿದರು ಈ ಮಧ್ಯೆ ಭೀಕರ ಕಾಲಕೂಟ ವಿಷ ಹುಟ್ಟಿದಾಗ ಹಾಲಾಹಲ - ಕೋಲಾಹಲವುಂಟಾಗಿ ನನಗೆಬೇಡ- ನನಗೆಬೇಡ ಎಂದು ಎಲ್ಲರೂ ದಿಕ್ಕೆಟ್ಟು ಓಡಿದರು ಆ ಕಷ್ಟದ ವೇಳೆಯಲ್ಲಿ ಲದು



ನನಗಿರಲಿ ಎಂದು ಪಡೆದು ಕುಡಿದು ಜಗತ್ತನ್ನೇ ಉದ್ಧರಿಸುವ ದೇವನನ್ನು ನಾವೆಲ್ಲ ಸ್ತುತಿಸೋಣ

ಶಿವನಿಗೆ ರುದ್ರಾಭಿಷೇಕ ಅತೀ ಪ್ರಿಯವಾದದ್ದು ನಮ್ಮ ಜೀವನ ಅಳುವಿನಿಂದ ಆರಂಭವಾಗುತ್ತದೆ ರುದಾಂದ್ರಾವಯಲ ಇತಿ ರುದ್ರ ಅಂದರೆ ರೋಧನವನ್ನು ದೂರ ಮಾಡುವವನೇ ರುದ್ರ ತನ್ನ ಆರಾಧಕರಿಗೆ ರುದ್ರ ಶಿವಂಕರ ಶುಭಂಕರ ಸರ್ವೋ ವೈ ರುದ್ರ ಸ್ತಸ್ಮೈರುದ್ರಾಯ ನಮೋ ಅಸ್ತು" ಅಂದರೆ ಪ್ರಪಂಚದ ಸಕಲ ವಸ್ತುಗಳೂ ರುದ್ರಾಂಶಗಳೇ ಸರಿ ಅವೆಲ್ಲಕೂ ಪಂದಿಲ ನಮಗಾಗಿ ಅವುಗಳನ್ನು ನೀಡುವಂತೆ ರುದ್ರಾಧ್ಯಾಯದಲ್ಲಿ ಪ್ರಾರ್ಥಿಸಲಾಗಿದೆ ಅಲ್ಲದೆ ಆ ಮೃತ್ಯುಂಜಯನಲ್ಲಿ ಮನೆಯ ಬಾಲಕರು ಬಾಲಕರು ಯುವಕರು ರಕ್ಷಕರು ಹಾಗೂ ಮುದುಕರನ್ನು ಕಾಪಾಡಿ ಅಪಮೃತ್ಯು ತಪ್ಪಿಸೆಂದು ಪ್ರಾರ್ಥಿಸಲಾಗಿದೆ ಹಂತ-ಹಂತವಾಗಿ ಈ ಪ್ರಾರ್ಥನೆ ವ್ಯಷ್ಟಿಯಿಂದ ಸಮಷ್ಟಿಯತ್ತ ಸಾಗಿ ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ನನಾತುರಂ ಅಂದರೆ ಜಗ ಹೃದಯವೇ ಆನಂದಮಯವಾಗಿ ರೋಗ-ರುಜಿನಗಳಿಲ್ಲದೆ ದ್ವೇಷಾಸೂಯೆಗಳಿಲ್ಲದೆ ಸಿದ್ಧಿ- ಸಮೃದ್ಧಿಗಳಿಂದ ತುಷ್ಟಿ-ಪುಷ್ಟಿಗಳಿಂದ ರಾರಾಜಿಸಲಿ ಎಂದು ಪ್ರಾರ್ಥಿಸಲಾಗಿದೆ ನಾಲ್ಕೂ ಯಾಮಗಳಲ್ಲಿ ರುದ್ರಾಭಿಷೇಕ ಮಾಡಿದರೆ ಅದಕ್ಕೆ ನಾಲ್ಕು ವೇದಾಭಿಷೇಕದಷ್ಟೇ ಫಲ ಕವಿ ಬೇಂದ್ರೆ ಹೇಳುವಂತೆ "ನನ್ನ ಹರಣ ನಿನಗೆ ಶರಣ ಸಕಲಕಾರ್ಯ ಕಾರಣ" ಹರನಿಗೆ ಎರಗಿದಾಗ ಸಕಲ ಕಾರ್ಯ ಸಿದ್ಧಿ

ಕವಿ ನೇಡಿಯಾಪು ಕೃಷ್ಣಭಟ್ಟರು ಎಂದೆದೆ ಹೇಳುತ್ತಾರೆ—

ಈಶ್ವರನಿರುವನೋ? ಗೊತ್ತಿಲ್ಲ
ನಶ್ವರ ಜಗವಿದು ಗೊತ್ತಿಲ್ಲ?
ಈಶ್ವರ ನಿಷ್ಠೆಯೇ ಭಯಹರವೆಂಬುದು
ದಿನ-ದಿನಕನುಭವವಹುದಲ್ಲಾ?
ಹಾಗಾದರೆ ಶಿವನಿರುವನಿರುವನಿದ
ನಂಬು ನಂಬು ಸಂಶಯ ಸಲ್ಲ

ಶಿವನ ಅಸ್ತಿತ್ವದ ಬಗ್ಗೆ ಯಾರೂ ಸಂಶಯಪಡಬೇಕಾಗಿಲ್ಲ ಎನ್ನುತ್ತಾರೆ ಕವಿ ನಮ್ಮ ಶಿಲಾಶಾಸನಗಳಂತೂ ಶಿವಲಿಂಗಪ್ರತಿಷ್ಠಿಸಿದವಂ ಶಿವನೆ ಆಕುಂ ಎಂದು ಸಾರುತ್ತವೆ

## ಪುರಾಣಗಳಲ್ಲಿ ಶಿವ

ವೇದವಲ್ಲದೆ ಲಿಂಗಪುರಾಣ ಶಿವಪುರಾಣ ಸ್ಕಂದಪುರಾಣ ಕೂರ್ಮಪುರಾಣ ಶಿವರಹಸ್ಯ

ಶೈವಾಗಮ ಮುಂತಾದವು ಶಿವಮಹಿಮೆಯನ್ನು ಸಾರುತ್ತರೆ ಸ್ಕಂದಪುರಾಣದ ಒಂದು ಮಾತು ಸ್ಮರಣಾರ್ಹ

ಸಂಸಾರಮುಲ್ಬಣಮಸಾರಮವಾಪ್ಯ ಜಂತೋ
ಸಾರೋಯಮಿಶ್ವರ ಪಾದಾಂಬುರುಹಸ್ಯ ಸೇವಾ

ಅಂದರೆ ಅಪಾರವಾದ ಜನಿಸಿದ ಮನುಷ್ಯನಿಗೆ ಈಶ್ವರಾರಾಧನೆಯೇ ಸಾರ ವ್ಯಾಧಿ ನಿವಾರಣೆಗೆ ಆಯುರಾರೋಗ್ಯ ಐಶ್ವರ್ಯಕ್ಕೆ ಶಿವಾರಾಧನೆ ರಾಮಬಾಣ ತ್ಸ್ಮಿನ್ ಮಹೇಶೇ ವಿಧಿನೇಜ್ಯ ಮಾನೇ ಸರ್ವೇ ಪ್ರಸೀದಂತಿ ಸುರಾಧಿನಾಥಾ - ಅವನನ್ನು ಆರಾಧಿಸಿದರೆ ಎಲ್ಲಾ ದೇವತೆಗಳೂ ತುಷ್ಟರಾಗುತ್ತಾರೆ ಅಲ್ಲದೆ ಸಂದ ಪುರಾಣದಲ್ಲಿ ಅಲ್ಪಾಯುವಾದ ಬಾಲಕ ಶಿವಾನುಷ್ಠಾನದಿಂದ 10 ಸಾವಿರ ವರ್ಷ ಬದುಕಿದನೆಂದು ಹೇಳಿದೆ ಮಹಾಭಾರತದಲ್ಲಿ ಮಾರ್ಕಂಡೇಯ ಶಿವನನ್ನು ಆರಾಧಿಸಿ 14 ಕಲ್ಪಗಳವರೆಗೆ ದೀರ್ಘಾಯುಷ್ಯ ಪಡೆದ ವೃತ್ತಾಂತವಿದೆ ಹರಿವಂಶದಲ್ಲಿ ಶ್ರೀ ಕೃಷ್ಣನೂ ರುದ್ರ ಜಪ ಮಾಡಿದನೆಂದು ಹೇಳಿದೆ

ಕೈಲಾಸವಾಸ ಗೌರೀಶ ಈಶ
ತೈಲಧಾರೆಯಂತೆ ಮನಸು ಕೊಡು ಹರಿಯಲ್ಲಿ

ಎಂದು ವಿಜಯದಾಸರು ವಿಷ್ಣುಭಕ್ತಿ ಕೊಡುವಂತೆ ಶಿವನನ್ನು ಬೇಡಿಕೊಂಡಿದ್ದಾರೆ

## ಲಿಂಗರಹಸ್ಯ

ಲಿಂಗ ಬ್ರಹ್ಮಾಂಡಪ್ರತೀಕ ಅದಕೆ ಕೈ ಕಾಲು ಮುಖವಿಲ್ಲ ಅದು ಸಾಕಾರವೂ ಅಲ್ಲ ನಿರಾಕಾರವೂ ಅಲ್ಲ ಅದು ನಮ್ಮನ್ನು ಸಾಕಾರದಿಂದ ನಿರಾಕಾರದತ್ತ ಸಗುಣೋಪಾಸನೆಯಿಂದ ನಿರ್ಗುಣೋಪಾಸನೆಯತ್ತ ಕರೆದೊಯ್ಯುತ್ತದೆ ಈಶ್ವರ ಸರ್ವವ್ಯಾಪ್ತಿ

ಹೂವಿನಾಗ ಹುದುಗ್ಯಾನ
ಮಾಲ್ಯಾಗ ಮಲಗ್ಯಾನ
ಮೊಗ್ಗ್ಯಾಗ ಕಣ್ಣು ತೆರೆದಾನ ಲಿಂಗಯನ
ನೋಡಟಿಗೆ ನಿದ್ದಿ ಬಯಲಾಗಿ

ಈ ಪದ್ಯ ಅನುಭವಕ್ಕೊಂದು ಅಪೂರ್ವ ನಿದರ್ಶನ

## ಜ್ಞಾನಂ ಮಹೇಶ್ವರಾತ್ ಇಚ್ಛೇತ್

ಜ್ಞಾನವನ್ನು ಈಶ್ವರನಲ್ಲಿ ಬೇಡಬೇಕು ಜ್ಞಾನ ಶಕ್ತಿಯೇ ಮನುಷ್ಯನನ್ನು ಪ್ರಾಣಿಗಳಿಂದ ಉನ್ನತನನ್ನಾಗಿ ಮಾಡಿದೆ ಶಿವರಾತ್ರಿಯಂದು ಪೂಜೆ ಮುಗಿಸಿ ಅಂತ್ಯದಲ್ಲಿ ಸಂಸಾರ ಕ್ಲೇಶದಗ್ಧಸ್ಯ ಮತೇನಾಸೇನ ಶಂಕರ ಪ್ರಸೀದ ಸುಮುಖೋ ನಾಥ ಜ್ಞಾನದೃಷ್ಟಿ ಪ್ರದೋಭವ ಅಂದರೆ ಕಷ್ಟಮಯವಾದ ಈ ಸಂಸಾರ ಸಾಗರದಲ್ಲಿ ಮುಳು

ಗಿದ ನಾನು ಆಚರಿಸಿದ ಈ ವ್ರತದಿಂದ ತುಷ್ಟನಾಗಿ ನನಗೆ ಸುಜ್ಞಾನ ನೀಡು" ಎಂದು ವೇಡಲಾಗುತ್ತದೆ

## ಆಕಾರ ಅಂತರಂಗ ಸಂದೇಶ

ಈಶ್ವರನು ಚಂದ್ರನನ್ನು ತಲೆಯ ಮೇಲಿಟ್ಟು ಮೆರೆಸಿ ವಿಷವನ್ನು ಕಂಠದಲ್ಲಿ ಅಡಗಿಸಿಟ್ಟಂತೆ ನಾವೂ ಗುಣವನ್ನು ಮೆರೆಸಿ ದೋಷವನ್ನು ಮರೆಸಿ ಬಾಳಲು ಕಲಿಯಬೇಕು ಅವನ ಎಳಗವನ್ನೇ ನೋಡಿ ಅವನ ಕೈ-ಕೊರಳಿಗೆ ಸುತ್ತಿದ ಸರ್ಪಕ್ಕೆ ಗಣಪತಿಯ ವಾಹನ ಇಲಿಯನ್ನು ಕಂಡರಾಗದು ಷಣ್ಮುಖನ ವಾಹನ ನವಿಲಿಗೆ ಸರ್ಪವನ್ನು ಕಂಡರಾಗದು - ಪಾರ್ವತಿಯ ವಾಹನ ಸಿಂಹ ಗಜಮುಖವನ್ನು ಕಂಡು ಆನೆಯೆಂದು ಭಾವಿಸಿ ತಿನ್ನಲು ಧಾವಿಸುತ್ತದೆ ಗೌರಿಗೆ ಶಿವನ ತಲೆಯ ಗಂಗೆಯನ್ನು ಕಂಡರೆ ಅಸೂಯೆ ಇವರೆಲ್ಲರನ್ನು ಸಮತೋಲನದಲ್ಲಿಟ್ಟುಕೊಂಡು ಹೋಗುವಲ್ಲಿ ಅವನ ಅಗ್ಗಳಿಕೆ ವ್ಯಕ್ತವಾಗುತ್ತದೆ ಭಕ್ತರಿಗೆ ಕಲ್ಯಾಣವನ್ನುಂಟುಮಾಡುವುದರಿಂದ ಆತ ಶಂಕರ ಕಾಮನನ್ನು ನಿಗ್ರಹಿಸಿದ ಕಾಮಾರಿ ಸ್ಥೂಲ-ಸೂಕ್ಷ್ಮ-ಕಾರಣವೆಂಬ ಪುರಗಳಿಗೆ ಅಂತಕನಾದುದರಿಂದ ತ್ರಿಪುರಾರಿ ಹೀಗೆ ಒಂದೊಂದು ಹೆಸರೂ ಅರ್ಥಪೂರ್ಣ ಅವನ ಕೈಯಲ್ಲಿರುವ ತ್ರಿಶೂಲ ಸತ್ವ-ರಜ-ತಮೋಗುಣಗಳಿಗೂ ದಮರುಗ ಶಬ್ದಬ್ರಹ್ಮಕ್ಕು ಗಂಗೆ ಅಮೃತಕ್ಕೂ ಗಜಚರ್ಮ ಗರ್ವ ನಿಗ್ರಹಕೂ ವಿಭೂತಿ ಪರಿಶುದ್ಧತೆಗೂ ಹಣೆಗಣ್ಣು ಜ್ಞಾನಕ್ಕೂ ಚಂದ್ರ ಆನಂದಕ್ಕೂ ಸಂಕೇತಗಳಾಗಿವೆ

ಅವನನ್ನು ಭಕ್ತಿಯಿಂದ ನಮಿಸಿದವರಿಗೆ ವೇಡಿದ್ದನ್ನು ನೀಡುವಷ್ಟು ಅಖಂಡೈಶ್ವರ್ಯವಿದ್ದರೂ ಅವನು ಮಾತ್ರ ಗಜಚರ್ಮಧಾರಿ ತನ್ನ ಪ್ರೇಯಸಿಗೆ ಅರ್ಧ ದೇಹವನ್ನು ಕೊಟ್ಟು ಸದಾ ಅವಳೊಡನಿದ್ದರೂ ವಿಷಯಾಸಕ್ತಿರಹಿತರಾದ ಯತಿಗಳನ್ನೂ ಮೀರಿದ ಪರಮಯತಿ ನೆಲ-ಜಲ-ಅಗ್ನಿ-ವಾಯು-ಆಕಾಶ- ಸೂರ್ಯ-ಚಂದ್ರ-ಯಜಮಾನ ರೂಪದಲ್ಲಿ ಅಷ್ಟಮೂರ್ತಿಯಾಗಿ ಸಮಸ್ತ ಜಗತ್ತನ್ನು ಧರಿಸಿದ್ದರೂ ನಿರಭಿಮಾನಿ ನಮ್ಮ ತಾಮಸ ವೃತ್ತಿಯನ್ನು ದೂರಮಾಡಿ, ಸನ್ಮಾರ್ಗವನ್ನು ನೀಡಲು ಇಂಥ ಪರಶಿವನಿಗಲ್ಲದೆ ಮತ್ತಾರಿಗೆ ಸಾಧ್ಯ ?

## ಶಿವರಾತ್ರಿಯ ಕಥೆ

ಶಿವಲಿಂಗಾಮೃತದಲ್ಲಿ ಬರುವ ಈ ಕಥೆಯನ್ನು ಶಿವನೇ ಪಾರ್ವತಿಗೆ ಹೇಳಿದ್ದಾನೆ

ಪ್ರತ್ಯಂತವೆಂಬ ದೇಶದಲ್ಲಿ ಸದಾ ಬೇಟೆ ಮಾಡಿ ಜೀವಿಸುವ ಒಬ್ಬ ಬೇಡನಿದ್ದ ಒಂದು ದಿನ ಹಗಲೆಲ್ಲ ಅಲೆದರೂ ಅವನಿಗೆ ಬೇಟೆ ಸಿಗಲಿಲ್ಲ ರಾತ್ರಿ ಸರೋವರವೊಂದರ ಬಳಿ ಇದ್ದ ಬಿಲ್ವವೃಕ್ಷವನ್ನೇರಿ ಅಲ್ಲಿಗೆ ನೀರು ಕುಡಿಯಲು ಬರುವ ಪ್ರಾಣಿಯನ್ನು ಕೊಲ್ಲಲು ಹೊಂಚುಹಾಕುತ್ತಿದ್ದ ಅಂದು ಶಿವರಾತ್ರಿಯಾಗಿತ್ತು ಆದರೆ ಬೇಡನಿಗೆ ತಿಥಿ-ಮಿತಿಗಳ ಪರಿವೆಯಿಲ್ಲ ಬಿಲ್ವವೃಕ್ಷದಡಿಯಲ್ಲೇ ಒಂದು ಬಯಲು ಲಿಂಗವಿದ್ದುದರ ಅರಿವೂ ಅವನಿಗಿಲ್ಲ ಅವನಿಗೆ ಅರಿವಿಲ್ಲದಂತೆ ದೃಷ್ಟಿಗೆ ಅಡ್ಡ ಬಂತೆಂದು ಕಿತ್ತು ಬಿಸಾಡಿದ ಬಿಲ್ವಪತ್ರೆಗಳು ಮರದಡಿಯಿದ್ದ ಲಿಂಗವನ್ನು ಮುಚ್ಚಿದ್ದವು

ಆ ಸಮಯಕ್ಕ ಒಂದು ತುಂಬು ಗರ್ಭಿಣಿಯಾದ ಜಿಂಕೆ ನೀರು ಕುಡಿಯಲು ಬಂದಿತು ವೇಡ ಬಾಣ ಬಿಡಲು ಸನ್ನದ್ಧನಾದಾಗ ಅದು ನುಡಿಯಿತು ತುಂಬಾ ಗರ್ಭಿಣಿಯಾದ ನನ್ನನ್ನು ಕೊಂದು ಭ್ರೂಣಹತ್ಯಾ ಪಾಪಕೆ ಗುರಿಯಾಗವೇಡ ಸ್ವಲ್ಪ ಸಮಯದಲ್ಲೇ ಪ್ರಸವಿಸಿದ ಬಳಿಕ ನಾನಾಗಿ ಇಲ್ಲಿಗೆ ಬಂದು ದೇಹ ಅರ್ಪಿಸುವೆ ಶಿವನಾಣೆ ಶಿವನಾಣೆ" ಎಂದಾಗ ವೇದನಿಗೆ ಶಿವ ಶಬ್ದ ಕೇಳುತ್ತಲೇ ದಯೆ ಹುಟ್ಟಿ ಬಿಟ್ಟು ಬಿಟ್ಟನು ನಿದ್ರೆ ಬದೆಯಲು ಪತ್ರ ಕಿತ್ತು ಏಸೆಯುತ್ತಲೇ ಇರನು ಎರಡನೇ ಯಾಮದಲ್ಲಿ ಇನ್ನೊಂದು ಹರಿಣಿ ಮೂರು ಮರಿಗಳೊಂದಿಗೆ ನೀರು ಕುಡಿಯಲು ಬಂದಿದು ಅದೂ ಹಾಗೇ ವೇದನನ್ನು ಕುರಿರು ಈ ಮರಿಗಳನ್ನು ಪತಿಯೆದೆ ಬಿಟ್ಟು ಬರುವವರನಕ ಸೈರಿಸು ಇಲ್ಲವಾದರೆ ಅವು ಅನಾಥವಾಗುತ್ತವೆ" ಎಂದಾಗ ದಯೆ ಹುಟ್ಟಿ ಅದನ್ನೂ ಬಿಟ್ಟ ನಂತರ ಒಂದು ಗಂಡು ಜಿಂಕೆ ಬಂದಿತು ಅದಕ್ಕೆ ಬಾಣ ಹೂಡಿದಾಗ ಅದು ಶಿವಾ ಶಿವಾ ನನ್ನನ್ನೇಕೆ ಕೊಲ್ಲುವೇ? ಮೊದಲು ನೀನು ದಯೇ ತೋರಿ ಬಿಟ್ಟ ಎರಡೂ ಜಿಂಕೆಗಳು ನನಗಾಗಿ ಕಾಯುತ್ತಿವೆ ಅವುಗಳೊಂದಿಗೆ ಇಲ್ಲಿಗೆ ತಪ್ಪದೇ ಬರುವೆ ಶಿವನಾಣೆ ಎಂದಾಗ ಬಿಟ್ಟು ಬಿಟ್ಟ

ಮಾತಿನಂತೆ ಬೆಳಗಿನ ಜಾವಕ್ಕೆ ಎಲ್ಲಾ ಜಿಂಕೆಗಳು ಮರಿಗಳು ಬಂದು ಈಗ ಕೊಲ್ಲು ಎಂದವು ಉಷ ಕಾಲ ಸಮೀಪಿಸಿತ್ತು ವೇದನ ಮನಸ್ಸೇ ಪರಿವರ್ತನೆಯಾಗಿತ್ತು ಆಗ ಅವನು " ಶಿವ-ಶಿವ ನಿಮ್ಮನ್ನು ಕೊಂದು ನಾನಾವ ನರಕಕೆ ಹೋಗಲಿ? ಎಂದು ಹೇಳಿ ಬಿಲ್ಲು-ಬಾಣ ಸರೋವರಕ್ಕೆ ಎಸೆದ

ಆ ದಿನ ವೇದನಿಗರಿವಿಲ್ಲದಂತೆ ನಿರಾಹಾರ, ಲಿಂಗಾರ್ಚನೆ ಜಾಗರಣೆ ಶಿವನಾಮಸ್ಮರಣೆ ಎಲ್ಲಾ ಆಗಿ ಕಟ್ಟಾ ಶಿವರಾತ್ರಿಯ ಆಚರಣೆ ನಡೆದಿತ್ತು ಶಿವನು ಅವನ ಬಗ್ಗೆ ಪ್ರಸನ್ನನಾಗಿದ್ದ ಕೂಡಲೇ ಅಲ್ಲಿಗೆ ಬಂದ ಶಿವಗಣಗಳು ವಿಮಾನದಲ್ಲಿ ಆ ಜಿಂಕೆಗಳೊಂದಿಗೆ ಕುಟುಂಬಸಹಿತ ಬೇಡನನ್ನು ಕೂರಿಸಿಕೊಂಡು ಕೈಲಾಸಕೆ ಕರೆದೊಯ್ದರು ಅವನನ್ನು ಬರಮಾಡಿಕೊಂಡ ಶಿವನು "ನಿನಗಷ್ಟೇ ಅಲ್ಲ ನಿನ್ನ ಕಥೆಕೇಳಿದವರಿಗೂ ಶಿವರಾತ್ರಿಯಂದು ಮಡಿದವರಿಗೂ ಕೈಲಾಸಪದವಿ ಖಚಿತ ಎಂದು ಭೋಲೋಕಕ್ಕೆ ಆಶ್ವಾಸನೆಯಿತ್ತನು

## ಶಿವರಾತ್ರಿಯನ್ನು ಕುರಿತು ಇನ್ನೊಂದು ಕಥೆ ಹೀಗಿದೆ

ಉಜ್ಜಯಿನಿಯ ಚಂದ್ರಸೇನ ದೊರೆ ಮಹಾಶಿವಭಕ್ತನಾಗಿದ್ದ ನಿತ್ಯ ಅಲ್ಲಿಂದ ಮಹಾಕಾಲೇಶ್ವರನನ್ನು ಪೂಜಿಸುತ್ತಿದ್ದ ಶಿವಾನುಗ್ರಹ ಮತ್ತು ಅಂಗರಕ್ಷಕನಾದ ಮಣಿಭದ್ರನು ಕೊಟ್ಟ ಚಿಂತಾಮಣಿ ರತ್ನದ ಪ್ರಭಾವದಿಂದ ಇಂದ್ರನನ್ನೂ ಮೀರಿಸುವಷ್ಟು ಅಷ್ಟೈಶ್ವರ್ಯ ಶ್ರೀಮಂತನಾಗಿದ್ದ ಚಿಂತಾಮಣಿ ರತ್ನ ಪ್ರಭಾವ ಕೇಳಿದ ಶತ್ರು ರಾಜರು ಆ ರತ್ನ ಕೇಳಿದರೂ ದೊರೆ ಕೊಡಲಿಲ್ಲ ಇದರಿಂದ ಸಿಟ್ಟಿಗೆದ್ದ ಅವರೆಲ್ಲಾ ಸೇರಿ ರಾಜನ ಮೇಲೆ ಎರಗಿದರು

ಅಂದು ಶನಿವಾರ ಶಿವರಾತ್ರಿ ಅನಿರೀಕ್ಷಿತ ದಾಳಿಯಿಂದ ದಿಕ್ಕುತೋಚದ ರಾಜ ಮಹಾಕಾಲೇಶ್ವರನನ್ನೇ ಮೊರೆ ಹೊಕ್ಕು ಪೂಜಾ ನಿರತನಾದ

ಆ ದೇವಾಲಯದ ಹೊರವಲಯದಲ್ಲೇ ಎಡವಿಯೊಬ್ಬಳ ಗುಡಿಸಲಿತ್ತು ಅವರ ಐದು ವರ್ಷದ ಮಗ ಶ್ರೀಕರ ರಾಜನು ಮಾಡುವ ಪೂಜ ನೋಡಿ ತಾನೂ ಮಣ್ಣಿನ ಲಿಂಗಗಳನ್ನು ಮಾಡಿ ಪೂಜಿಸುತ್ತಿದ್ದ ಅದೇ ಶನಿವಾರ ಶಿವರಾತ್ರಿಯ ಪ್ರದೋಷಕಾಲ ತಾಯಿ ಮಗನ ಚೇಷ್ಟೆ ಕಂಡು ಲಿಂಗ ಕಿತ್ತೆಸೆಯಲು ಹೊರಟಾಗ ಶ್ರೀಕರ ಅಯ್ಯೋ ಎಂದು ಅಳುತ್ತಾ ಸ್ವಾಮಿ ನನ್ನ ಸೇವೆ ಸ್ವೀಕರಿಸು ತಾಯಿಗೆ ಒಳ್ಳೇ ಬುದ್ಧಿ ಕೊಡು ಎಂದು ವೇಡಿಕೊಳ್ಳುತ್ತಿರುವಾಗಲೇ ಆ ಲಿಂಗಗಳೆಲ್ಲಾ ಹೊಳೆ-ಹೊಳೆಯುವ ಲಿಂಗಗಳಾಗಿ ಅದರ ಮೇಲೆ ಚಿನ್ನದ ದೇವಾಲಯ ನಿರ್ಮಾಣವಾಯಿತು

ಈ ಸುದ್ದಿ ಗಾಳಿಯಂತೆ ಎಲ್ಲೆಡೆ ವ್ಯಾಪಿಸಿತು ಕೇಳಿದವರಿಗೆಲ್ಲಾ ಅತ್ಯಾಶ್ಚರ್ಯ ಶತ್ರುರಾಜರೂ




# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

**ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ**

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5–30 ಗಂಟೆಗೆ |
| (ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | |
| 1 ನೇ ಗಂಟೆ | ಬೆಳಗ್ಗೆ 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ 11–30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12–00 ಗಂಟೆಗೆ |
| 3 ನೇ ಗಂಟೆ | ಸಂಜೆ 6–00 ಗಂಟೆಗೆ |
| ಸರ್ವದರ್ಶನ | ಸಂಜೆ 6–30 ಗಂಟೆಗೆ |
| ಶುದ್ಧಿ | ರಾತ್ರಿ 8–45 ಗಂಟೆಗೆ |
| ಏಕಾಂತ | ರಾತ್ರಿ 9–00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9–00 ಗಂಟೆಗೆ |
| (ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/ ) | |
| ಎರಡನೇ ಗಂಟೆ | ಬೆಳಗ್ಗೆ 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11–30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7–00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/–) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು ) | |
| 3 ನೇ ಗಂಟೆ | ರಾತ್ರಿ 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ 8–30 ಗಂಟೆಗೆ |
| ಶುದ್ಧಿ | ರಾತ್ರಿ 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9–45 ಗಂಟೆಗೆ |

**ಪೇಷ್ಕಾರ್.**

ಈ ಸುದ್ದಿ ಕೇಳಿ ಆಶ್ಚರ್ಯಗೊಂಡು ವೈರಬಿಟ್ಟು ಶಿವದರ್ಶನಕ್ಕೆ ಬಂದರು ಚಂದ್ರಸೇನ ನೊಂದಿಗೆ ಮಿತ್ರತ್ವ ಬೆಳೆಸಿ ಎಲ್ಲಾ ಒಟ್ಟಾಗಿ ಶಿವರಾತ್ರಿ ಯಂದು ಶಿವಪೂಜೆ ಭಜನೆ ಪಂಚಾಕ್ಷರಿ ಕೀರ್ತ ನೆಗಳನ್ನು ವೈಭವದಿಂದ ನಡೆಸಿದರು ಅವರೆಲ್ಲ ರಿಗೂ ಶಿವಾನುಗ್ರಹದಿಂದ ಇಹ-ಪರ ಸುಖ-ಸಂ ಪತ್ತು ಸದ್ಗತಿ- ದೊರಕಿದವು

ಶಿವಾರಾಧನೆಗೆ ಐಶ್ವರ್ಯ ಸಂಪತ್ತು ಆಡಂ ಬರ ಯಾವುದೂ ಬೇಕಿಲ್ಲ ಬೆಟ್ಟದ ಪತ್ರೆ, ಬಾವಿಯ ನೀರು ಒಳ್ಳೆಯ ಭಾವನೆ ಇದ್ದರೆ ಸಾಕು

## ಶಿವರಾತ್ರಿಯ ಬಹಿರಂಗ ವಿಕೃತ ರೂಪ

ಇತ್ತೀಚೆಗೆ ಶಿವರಾತ್ರಿ ಕೆಲವರಿಗೆ ಮೋಜಿನ ಹಬ್ಬವಾಗಿದೆ ಜಾಗರಣೆಯ ಹೆಸರಿನಲ್ಲಿ ಜೂಜು ಇಸ್ಪೀಟು ಸಿನೀಮಾ ಬೇಕಾಬಿಟ್ಟಿ ಓಡಾಡುತ್ತಾ ಕೇಕೆ ಹಾಕುತ್ತಾ ವ್ಯರ್ಥ ಕಾಲಹರಣ ಮಾಡಿ ಒಟ್ಟಾರೆ ನಿದ್ದೆಗೆಡುವುದು ಕಂಡುಬರುತ್ತದೆ ಇದು ಶಿವರಾತ್ರಿಯ ಆಚರಣೆಯಲ್ಲ ಹೀಗೆ ಕಾಲಹರಣ ಮಾಡುವುದಕ್ಕಿಂತ ನಿದ್ದೆ ಮಾಡುವುದೊಳ್ಳೆಯದು ಇದರಿಂದ ಶಿವನು ಪ್ರೀತನಾಗುವ ಬದಲು ಸಿಟ್ಟು ಗೊಂಡಾನು

ಮಹಾಶಿವರಾತ್ರಿ ಪ್ರಾಂತ ಭೇದವಿಲ್ಲದೆ ಇಡೀ ದೇಶಾದ್ಯಂತ ಆಚರಿಸುವ ಉಪವಾಸ ಜಾಗರಣೆ ಪ್ರಧಾನವಾದ ಹಬ್ಬ ಇಂದ್ರಿಯ ಖಂಡನೆ ದೇಹ ದಂಡನೆಗೆ ಇಲ್ಲಿ ಪ್ರಾಧಾನ್ಯ ಜಗತ್ತಿನ ಕ್ಷಾಮ ದೂರವಾಗಿ ಕ್ಷೇಮ ನೆಲೆಸಲು ನಮ್ಮ ಮುಖ ಶವಮುಖವಾಗದೆ ಶಿವಮುಖವಾಗಲು ನಮ್ಮ ಬಾಳು ಬೀಳಾಗದೆ ಧೂಳಾಗದೆ ಅಮೃತ ವಾಗಲು ನರ-ಹರನಾಗಲು ನಮ್ಮಲ್ಲಿಯ ಪಶುತ್ವ ಕಳೆದುಕೊಂಡು ಪಶುಪತಿಯತ್ತ ಸಾಗಲು ಶಿವ ರಾತ್ರಿ ವ್ರತ ಪೂರಕ – ಪ್ರೇರಕ – ತಾರಕವೆನ್ನಬ ಹುದು



# ತ್ಯಾಗರಾಜರು ಕಂಡ ಶಿವ ಮತ್ತು ದೇವಿ

**ಕರ್ನಾಟಕ** ಸಂಗೀತಲೋಕದ ಧ್ರುವತಾರೆಯಾದ ಸದ್ಗುರು ತ್ಯಾಗರಾಜರು (ಕ್ರಿ ಶ 1767-1847) ಕರ್ನಾಟಕ ಸಂಗೀತದ ಸ್ಮೃತಿಕಾರರೂ ಶ್ರೀರಾಮನ ಅತ್ಯಂತ ಶ್ರೇಷ್ಠ ಭಕ್ತರೂ ಆಗಿ ತಮ್ಮ ನೂರಾರು ರಚನೆಗಳ ಮೂಲಕ ಪುರಂದರದಾಸರಿಂದ ನಿರ್ಮಿಸಲ್ಪಟ್ಟ ಸಂಗೀತದ ತಳಹದಿಯಮೇಲೆ ದಿವ್ಯ ಸುಂದರವಾದ ಸೌಧವನ್ನು ನಿರ್ಮಿಸಿ ಅಮರರಾಗಿದ್ದಾರೆ ಭಕ್ತಿಮಾರ್ಗವನ್ನು ತಮ್ಮ ರಚನೆಗಳ ಮೂಲಕ ಬೋಧಿಸಿ ಸಮಾಜ ಸುಧಾರಣೆ ಮಾಡಿದರು ಅವರು ತಮ್ಮ ಜೀವಿತದ ಉತ್ತರಭಾಗದಲ್ಲಿ ದಕ್ಷಿಣ ಭಾರತದ ಕೆಲವು ಕ್ಷೇತ್ರಗಳ ಅಧಿದೇವತೆಯನ್ನು ಕುರಿತು ಸ್ತುತಿಸಿದರು ಅವರಿಗೆ ಮಹಾಕವಿಗಳಿಗಿರಬೇಕಾದ ಗುಣಗಳೆಷ್ಟೋ ಸ್ವತ ಸ್ಸಿದ್ಧವಾಗಿದ್ದುವು ಅವರ ರಚನೆಗಳಲ್ಲಿ ಕೃತ್ರಿಮವಾಗಿ ಕಂಡುಬರುವ ಭಾವಗಳೇ ಇಲ್ಲ ಕವಿತಾಮಾರ್ಗದಲ್ಲಿ ಒಂದು ಹೊಸತನವನ್ನು ಏರ್ಪಡಿಸಿ ಭಾವಗಳಿಗೆ ಧಾರಾಳತೆ ವಿಲಾಸ ಮತ್ತು ಕೇಳುವವರನ್ನು ಸೆಳೆಯುವ ಶಕ್ತಿಯನ್ನು ತಮ್ಮ ಪ್ರತಿಭಾಶಕ್ತಿಯಿಂದ ತುಂಬಿದರು ಅವರ ರಚನಗಳೆಲ್ಲವೂ ಅವರ ಅಲೌಕಿಕ ಆನಂದರ ಪ್ರಕಟನೆ ಅಥವಾ ನುಡಿವಳಿಕೆಗಳಾಗಿವೆ

ಸಂಗೀತವು ಪ್ರಧಾನವಾದ ರಚನೆಗಳಲ್ಲಿ ವರ್ಣನೆ ಮತ್ತು ಕವಿಕಲ್ಪನೆಗೆ ಅವಕಾಶವು ಹೆಚ್ಚಾಗಿರುವುದಿಲ್ಲ ದ್ರಾಕ್ಷಾರಸಪಾಕವುಳ್ಳ, ಅವರ ರಚನೆಗಳಲ್ಲಿ ಸಲಕ್ಷಣವಾದ, ಹೃದಯಾನಂದವನ್ನೀಯುವ ಸಂಗೀತದಲ್ಲೇ ಅವರು ಅಲ್ಲಲ್ಲಿ ನದಿ ಮತ್ತು ಪುರವರ್ಣನೆ ಮಾಡಿರುವುದು ಅವರ ಸಹಜ ಕವಿತ್ವದ ದ್ಯೋತಕವಾಗಿದೆ ಕಾವೇರಿನದಿ- ತೀರವು ತಪೋಭೂಮಿ ಸಾರಿವೆಡಲಿನ ಈ ಕಾವೇರಿನಿ ಚೂಡರೇ ಎಂಬ ಕೃತಿಯಲ್ಲಿ ಕಾವೇರಿಯನ್ನು ಅಭಿಮಾನದಿಂದ ಕನ್ಯಕಾಮಣಿ ಎಂದು ಭಾವಿಸಿ ವಿವರಿಸಿದ್ದಾರೆ ಈ ಕನ್ಯಕಾಮಣಿಯು ಯಾವ ಭೇದ ಭಾವವೂ ಇಲ್ಲದೆ ಜನರ ಅಭೀಷ್ಟವನ್ನು ಈಡೇರಿಸುತ್ತ ತನ್ನ ಪತಿಯ ಗೃಹದ ಕಡೆಗೆ ಪ್ರವಹಿಸುತ್ತಿದ್ದಾಳೆ ಒಂದುಕಡೆ ವೇಗವಾಗಿ ಹರಿಯುತ್ತ ಮತ್ತೊಂದುಕಡೆ ಭೋರ್ಗರೆಯುತ್ತ ಇನ್ನೊಂದುಕಡೆ ಗಂಭೀರವಾಗಿ ಹರಿಯುತ್ತಿದ್ದಾಳೆ ಅವಳ ತೀರದಲ್ಲಿ ಕೋಗಿಲೆಗಳು ಇಂಪಾಗಿಹಾಡುತ್ತಿವೆ ಶ್ರೀರಂಗನಾಥನ ದರ್ಶನ ಮಾಡಿ ಪೂಜಿಸಲು ಅವಳು ಜಗದಾತ್ಮನಾದ ಪಂಚನದೀಶ್ವರನ ಬಳಿಗೆ ಬರುತ್ತಾಳೆ ಅವಳ ಉಭಯತೀರಗಳಲ್ಲಿರುವ ಬ್ರಾಹ್ಮಣರು ಅವಳನ್ನು ರಾಜರಾಜೇಶ್ವರಿಯೆಂದು ಸ್ತುತಿಸಿ ಸುವಾಸನೆಯುಳ್ಳ ಪುಷ್ಪಗಳಿಂದ ಪೂಜಿಸುತ್ತಾರೆ ಇಂತಹ ವರಕಾವೇರಿ ಕನ್ಯಕಾಮಣಿಯನ್ನು ನೋಡಿ ಎಂದು ಕಾವೇರಿನದಿಯನ್ನೂ ಪಂಚನದಿ ಕ್ಷೇತ್ರವನ್ನೂ ನದಿಯ ಸುಂದರ ದೃಶ್ಯ ಹಾಗೂ ಪ್ರಕೃತಿ ಸೌಂದರ್ಯವನ್ನೂ ವರ್ಣಿಸಿದ್ದಾರೆ



**ಮುರಿಪೆಮು ಕಲಿಗೆ ಕದಾ ಶ್ರೀರಾಮ** ಎಂಬ ಮುಖಾರಿರಾಗದ ಕೃತಿಯಲ್ಲಿ ತನಗೆ ಆಶ್ರಯವಾದ ಚೋಳದೇಶವನ್ನು ವರ್ಣಿಸಿದ್ದಾರೆ ಶಿವನಿಂದ ಪ್ರೀತಿಸಲ್ಪಟ್ಟ ಚೋಳದೇಶದಲ್ಲಿ ಹಿತಕರವಾದ ಮಲಯಮಾರುತವು ಬೀಸುತ್ತದೆ ಕಾವೇರಿ ದಡದಲ್ಲಿ ಸುಂದರವಾದ ಸದನಗಳಿವೆ ಬ್ರಾಹ್ಮಣರು ವೇದಘೋಷ ಅಗ್ನಿಹೋತ್ರ ಮಾಡುವ ಪಂಚನದಿ ಕ್ಷೇತ್ರವಿದೆ ಚಿನ್ನದಿಂದ ಮಾಡಿದ ನವರತ್ನಾಲಂಕೃತವಾದ ಸುತ್ತಲೂ ಸುಗಂಧಬೀರುವ ಪುಷ್ಪಗಳಿಂದ ಅಲಂಕೃತವಾದ ಮಂಟಪದಲ್ಲಿ ಶ್ರೀರಾಮನು ವಿರಾಜಮಾನನಾಗಿದ್ದಾನೆ ಅಲ್ಲಿ ಶುಕಸನಕಾದಿ ಮುನಿಗಳು ಸ್ತುತಿಸುತ್ತಾರೆ ಕೋಗಿಲೆಗಳು ಗಾನಮಾಡುತ್ತಿವೆ ಸರಸ್ವತಿಯು ಅವನ ಸೇವೆ ಮಾಡುತ್ತಾಳೆ ಒಂದು ಪಕ್ಕದಲ್ಲಿ ಸೀತೆ ಮತ್ತೊಂದು ಪಕ್ಕದಲ್ಲಿ ಲಕ್ಷ್ಮಣನು ಸೇವೆಸಲ್ಲಿಸುತ್ತಿದ್ದಾರೆ ಆಂಜನೇಯನು ಪಾದಗಳ ಸೇವೆ ಮಾಡುತ್ತಿದ್ದಾನೆ ಎಂದು ವರ್ಣಿಸಿದ್ದಾರೆ

ತ್ಯಾಗರಾಜಸ್ವಾಮಿಯು ತಿರುವೈಯ್ಯಾರಿನಲ್ಲಿ ತಮ್ಮ ಮನೆಯಲ್ಲಿ ದಿವ್ಯಮಂಟಪದಮುಂದೆ ನಿಂತು ಪ್ರಭಾತಸೇವೆ ಮೊದಲಾಗಿ ಏಕಾಂತಸೇವೆಯವರೆಗೆ ನಿತ್ಯಕೈಂಕರ್ಯವನ್ನು ನೆರವೇರಿಸುತ್ತಿದ್ದರು ಈ ಕೃತಿಯಲ್ಲಿ ಪಂಚನದೀಶ್ವರಸ್ವಾಮಿಯ ದಿವ್ಯ ಸನ್ನಿಧಿಯಲ್ಲಿ ಶ್ರೀರಾಮನ ಮಹಾ ವೈಭವವನ್ನೂ ಸಮಾನವಾದ ವಾತಾವರಣವಿರುವ ಪಂಚನದೀ ಕ್ಷೇತ್ರವನ್ನೂ ವರ್ಣಿಸಿ ಆ ಸುಂದರವಾದ ಊರಿನಲ್ಲಿ ತಮ್ಮ ಮನೆಯಲ್ಲಿರುವ ನವರತ್ನ ಮಂಟಪವಾಸವು ಲಭಿಸಿರುವುದಕ್ಕೆ ಸಂತೋಷವಿಲ್ಲವೇ ಎಂದು ಶ್ರೀರಾಮನನ್ನು ಕೇಳಿ ಆತ್ಮೀಯವಾಗಿ ಭಾವಿಸಿ ಕೀರ್ತಿಸಿದ್ದಾರೆ

## ಶಿವ

ತಿರುವೈಯ್ಯಾರಿಗೆ ಪಂಚನದಿ ಕ್ಷೇತ್ರವೆಂದು ಹೆಸರು ಅಲ್ಲಿ ನೆಲಸಿರುವ ಅಧಿದೇವನು ಪಂಚನದೀಶ್ವರ ಅವನೇ ಪ್ರಣತಾರ್ಥಿಹರ ದೇವಿಯು ಧರ್ಮ ಸಂವರ್ಧನಿ ಶ್ರೀರಾಮನಲ್ಲಿ ಅಚಲ ಭಕ್ತಿಯುಳ್ಳ ತ್ಯಾಗರಾಜಸ್ವಾಮಿಯು ಸರ್ವವೂ ಶ್ರೀರಾಮಮಯ ಎಂಬ ಪರಿಣತ ಬುದ್ಧಿಯಿಂದ ತ್ರಿಕರಣಶುದ್ಧವಾಗಿ ಇತರ ದೈವ ಸ್ವರೂಪಗಳನ್ನು ವರ್ಣಿಸಿದ್ದಾರೆ

ದೈವರಾಮ ರಾಮ ಮಹಾದೇವ ಎಂಬ ಸೌರಾಷ್ಟ್ರರಾಗದ ಕೃತಿಯಲ್ಲಿ ಶ್ರೀರಾಮನನ್ನು ಭಾವಜಾರಿರೂಪ, ಮಹಾದೇವ, ಶಂಕರ, ಕರಧೃತಶರ ಭಕ್ತವಶಂಕರ ಎಂದು ಸಂಬೋಧಿಸಿ ಶಿವಕೇಶವರಿಗೆ ಅಭೇದವನ್ನು ಸೂಚಿಸಿದ್ದಾರೆ

ಡಾ|| ವಿ ಎಸ್ ಸಂಪತ್ಕುಮಾರಾಚಾರ್ಯ

ಇಲಲೋ ಪ್ರಣತಾರ್ಥಹರುಡನುತು ಎಂಬ ಅಠಾಣರಾಗದ ಕೃತಿಯಲ್ಲಿ ಬಹು ಕಾಲದಿದ ನಿನ್ನ ಧ್ಯಾನ ಮಾಡುತ್ತಾ ಕೊರಗಿ ಸವೆಯುತ್ತಾ ಭಕ್ತಿಯಿಂದ ದೇಹ ಆತ್ಮಗಳೆರಡನ್ನೂ ನಿನ್ನ ದಿವ್ಯ ಚರಣಗಳಲ್ಲಿ ಸಮರ್ಪಿಸಿದರೂ ನೀನು ನನ್ನಲ್ಲಿ ದಯೆ ತೋರದೆ ಇರುವೆಯೇಕೆ? ನಿನಗೆ ಪ್ರಣತಾರ್ಥಹರ (ಭಕ್ತರ ದುಃಖನಿವಾರಕ) ಮತ್ತು ಮಂಗಳಕರ (ಶಂಕರ) ಎಂಬ ಬಿರುದುಗಳನ್ನಿತ್ತವರಾರು? ಎಂದು ನಿಂದಾಸ್ತುತಿಯ ಮೂಲಕ ಪಂಚನದೀಶ್ವರನನ್ನು ಸ್ತುತಿಸಿದ್ದಾರೆ

ಏಹಿ ತ್ರಿಜಗದೀಶ ಎಂಬ ಸಾರಂಗರಾಗದ ಸಂಸ್ಕೃತದ ಕೃತಿಯಲ್ಲಿ ತ್ಯಾಗರಾಜಸ್ವಾಮಿಯು ಪಂಚರದೀಶ್ವರನನ್ನು ಮೂರು ಲೋಕಗಳೊಡೆಯನೇ! ಪಂಚನದೀಶ್ವರಾ! ಗಂಗಾಧರನೇ! ನನ್ನನ್ನು ರಕ್ಷಿಸು ಅಗಸ್ತ್ಯನಿಂದ ಸ್ತುತಿಸಲ್ಪಟ್ಟವನೇ! ಭಕ್ತರ ಹೃದಯಕಮಲದಲ್ಲಿರುವ ಭೃಂಗವೇ! ದುಷ್ಟಜನರನ್ನು ನಿವಾರಿಸುವ ಸಮೀರಣನೇ! ನನ್ನ ಪಾಪಗಳನ್ನು ನಾಶಮಾಡುವವನೇ! ನನ್ನ ಕೈಗಳನ್ನು ಹಿಡಿದು ರಕ್ಷಿಸು ಎಂದು ಭಕ್ತಿಯಿಂದ ಸ್ತುತಿಸಿದ್ದಾರೆ

ಮುಚ್ಚಟ ಬ್ರಹ್ಮಾದುಲಕು ದೊರಕುನಾ ಎಂಬ ಮಧ್ಯಮಾವತಿರಾಗದ ಕೃತಿಯಲ್ಲಿ ಪಂಚನದೀಶ್ವರನಾದ ಶಿವನು ಪರಮಪಾವನಿಯಾದ ಪಾರ್ವತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಅತ್ಯಂತ ಸುಂದರವಾಗಿ ವೈಭವದಿಂದ ಉತ್ಸವದಲ್ಲಿ ಬಿಜಮಾಡುತ್ತಿದ್ದಾನೆ ಎಲ್ಲರೂ ಬನ್ನಿ ದರ್ಶನಾನಂದವನ್ನು ಪಡೆಯೋಣ ಎಂದು ಕರೆಯಿತ್ತು, ತೇಜೋವಂತನಾದ ಮನೋಹರನಾದ ಸ್ವಾಮಿಯು ಆಭರಣಗಳು ಮತ್ತು ಪುಷ್ಪಹಾರಗಳಿಂದ ಅಲಂಕೃತನಾಗಿ ಅಲಂಕರಿಸಲ್ಪಟ್ಟ ಪಲ್ಲಕಿಯಲ್ಲಿ ಉಪಸ್ಥಿತನಾಗಿ, ನಿಜಭಕ್ತರಿಂದ ಸ್ತುತಿಸಲ್ಪಡುತ್ತ ದೇವತೆಗಳಂತೆ ಕಾಣುವ ಜನರಿಂದ ಬಿಜಮಾಡಿಸಿಕೊಳ್ಳುತ್ತಾ ಬರುತ್ತಿದ್ದಾನೆ ಅಡಿಗಡಿಗೆ ಲೆಕ್ಕವಿಲ್ಲದಷ್ಟು ಭಕ್ತರು ಅವನಿಗೆ ಹಿತವಾದ ನೈವೇದ್ಯವನ್ನು ಅರ್ಪಿಸುತ್ತಿದ್ದಾರೆ ಸತತವಾಗಿ ಜಪತಪಮಾಡುವ ನಿಜಭಕ್ತರನ್ನು ಸಂತೋಷದಿಂದ ನೋಡಿ ಅವರ ಅಭೀಷ್ಟಗಳನ್ನು ಅನುಗ್ರಹಿಸುತ್ತಾನೆ ಈ ವೈಭವವನ್ನು ನೋಡಿ ಭಾಗವತರು ಸುಸ್ವರದಿಂದ ವಿವಿಧ ರಾಗಗಳ ಆಲಾಪನೆಮಾಡಿ ಹರಿಕೀರ್ತನೆ ಮಾಡುತ್ತಿದ್ದಾರೆ ಕರುಣಾನಿಧಿಯೂ ನಾಗಭೂಷಣನೂ ಆದ ಪರಮಶಿವನು ಸಕಲ ಸುಜನರಿಗೆ ಜಾಗರೂಕತೆಯಿಂದ ಅವರ ಕೋರಿಕೆಗಳನ್ನು ಈಡೇರಿಸಿ ತಾನೇ ತ್ಯಾಗರಾಜನೆಂದು ತೋರಿಸಿಕೊಳ್ಳುತ್ತಿದ್ದಾನೆ ಎಂದು ವರ್ಣಿಸಿದ್ದಾರೆ

ಈ ಕೃತಿಯಲ್ಲಿ ತ್ಯಾಗರಾಜಸ್ವಾಮಿಯು ತಿರುವೈಯ್ಯಾರಿನಲ್ಲಿ ಜರುಗುವ ವಾರ್ಷಿಕ ಕಲ್ಯಾಣೋತ್ಸವದ ಸಂದರ್ಭದಲ್ಲಿ ನಡೆದ ಪರಮಶಿವನ ಸುಂದರವಾದ ಉತ್ಸವದ ವೈಭವವನ್ನು ವರ್ಣಿಸಿದ್ದಾರೆ ಈ ಸಂದರ್ಭದಲ್ಲಿ ಅವರು ತಮ್ಮ ಶಿಷ್ಯರೊಡಗೂಡಿ ತಂಬೂರಿಯನ್ನು ಹಿಡಿದು ವಿವಿಧ ರಾಗಗಳಿಂದ ಕೂಡಿದ ದಿವ್ಯಮೋಹಕವಾದ ಗಂಧರ್ವಗಾನವನ್ನು ರಮಣೀಯವಾಗಿ ನಡೆಸಿದ್ದನ್ನು ವರ್ಣಿಸಿದ್ದಾರೆ ಭಾಗವತರ ಹರಕೀರ್ತನೆಯು ಹರನಿಗೆ ಪ್ರಿಯವಾದುದು ಈ ನಾದಬ್ರಹ್ಮಾನಂದ ಭರಿತನಾದ ಶಿವನು ಸಕಲ ಸುಜನರಿಗೆ ಉಲ್ಲಾಸ ಹಾಗೂ ಜಾಗರೂಕತೆಯಿಂದ ಕೋರಿಕೆಗಳನ್ನು ಅನುಗ್ರಹಿಸಿದನು ಈ ಉತ್ಸವದ ದರ್ಶನವು ಬ್ರಹ್ಮಾದಿಗಳಿಗೂ ದುರ್ಲಭವೆಂದಿದ್ದಾರೆ

ಮದ್ರಾಸಿನ ಸಮೀಪದಲ್ಲಿರುವ ಕೋವೂರಿನ ಸುಂದರೇಶ್ವರಸ್ವಾಮಿಯ ದರ್ಶನಮಾಡಿ ತ್ಯಾಗರಾಜಸ್ವಾಮಿಯು ರಚಿಸಿ ಹಾಡಿರುವ ಐದು ಕೃತಿಗಳು ಕೋವೂರು ಪಂಚರತ್ನವೆಂದು ಪ್ರಸಿದ್ಧವಾಗಿವೆ ಈ ವಸುಧ ನೀವಂಟಿ ದೈವಮು ಎಂಬ ಶಹನಾರಾಗದ ಕೃತಿಯಲ್ಲಿ ಅರೆನಿಮಿಷಕಾಲ ನಿನ್ನ ಪವಿತ್ರಸ್ಥಳದಲ್ಲಿ ಭಕ್ತಿಯಿಂದ ಇದ್ದಮಾತ್ರಕ್ಕೆ ನಿನ್ನ ಕಾರುಣ್ಯ ಮತ್ತು ಔದಾರ್ಯದಿಂದ ಮನದಲ್ಲಿರುವ ಪಾಪವೆಲ್ಲವೂ ಹೋಗಿ ಭಕ್ತಿ ತೇಜಸ್ಸು ಧನರಾಶಿ ದೀರ್ಘಾಯುಸ್ಸು ಲಭಿಸುವುದು ಎಂದು ಸ್ತುತಿಸಿದ್ದಾರೆ

ನಮ್ಮಿ ವಚ್ಚಿಯುನ್ನ ಎಂಬ ಕಲ್ಯಾಣಿರಾಗದ ಕೃತಿಯಲ್ಲಿ ವೇದಪುರಾಣ ಶಾಸ್ತ್ರಾದಿಗಳ ಕೋರಿಕೆಯಂತೆ ಈ ಲೋಕದಲ್ಲಿ ಸೌಂದರ್ಯನಾಯಕಿಯ ಪತಿಯಾಗಿ ಅವತರಿಸಿರುವ ಪರಮಶಿವನು ನಾದರೂಪವೆಂದು ಸ್ತುತಿಸಿದ್ದಾರೆ ಶಿವನು ಮತಭೇದಗಳಿಗೆ ಮತ್ತು ವಾದಗಳಿಗೆ ಅತೀತನಾದ ಪರತತ್ವವೆಂದು ಕೀರ್ತಿಸಿರುವುದು ಗಮನಾರ್ಹ

ಸುಂದರೇಶ್ವರುನಿ ಎಂಬ ಶಂಕರಾಭರಣರಾಗದ ಕೃತಿಯಲ್ಲಿ ಅಂದವಾದ ಪವಿತ್ರಕಾಶಿಗೆ ಸಮಾನವಾದ ಗೋಪುರನಿವಾಸಿಯಾಗಿರುವ ಸುಂದರೇಶ್ವರನ ದರ್ಶನಮಾಡಿದ ಮೇಲೆ ಇತರ ದೇವತೆಗಳ ದರ್ಶನಮಾಡಲು ಮನಸ್ಸು ಬರುವುದೇ ಎಂದು ಉದ್ಗರಿಸಿ - ಅವನ ಚರಣಗಳಲ್ಲಿ ಬಂಗಾರದ ನೂಪುರಗಳು ಅಲಂಕೃತವಾಗಿವೆ ಅವನ

ಹಣೆಯಲ್ಲಿ ಕಸ್ತೂರಿ ತಿಲಕವು ಅಲಂಕೃತವಾಗಿ ಪ್ರಕಾಶಿಸುತ್ತಿದೆ ಬ್ರಹ್ಮಾದಿದೇವತೆಗಳು ದೇವ ತಾಸ್ತ್ರೀಯರು ತುಂಬುರು ನಾರದರು ಮತ್ತು ಎಲ್ಲ ಭಕ್ತರೂ ಸೇರಿ ಸ್ತುತಿಸುತ್ತಿರುವ ಅವನ ದರ್ಶನ ಒಂದೇ ನಾಲದೇ ಎಂದು ಕೀರ್ತಿಸಿದ್ದಾರೆ ಈ ಕೃತಿಯು ಶಂಕರಾಭರಣ ರಾಗದಲ್ಲಿರುವುದು ಒಂದು ವಿಶೇಷ

ಕೋರಿ ಸೇವಿಂಪ ರಾರೇ ಎಂಬ ಖರಹರಪ್ರಿಯರಾಗದ ಕೃತಿಯಲ್ಲಿ ಕೋವೂರಿನಲ್ಲಿ ಸೌಂದರ್ಯನಾಯಕಿಯ ಪತಿಯಾಗಿ ವಿರಾಜಿಸುತ್ತಿರುವ ಸುಂದರ ಮೂರ್ತಿಯನ್ನು ಪೂಜಿಸಿ ನಿಮ್ಮ ಇಷ್ಟಾರ್ಥಗಳನ್ನು ಪಡೆಯಿರಿ ಎಂದು ಹೇಳಿದ್ದಾರೆ

ದರ್ಶನಮು ಸೇಯ ನಾ ತರಮಾ ಎಂಬ ನಾರಾಯಣಗೌಳರಾಗದ ಕೃತಿಯಲ್ಲಿ ನಾಯಮಾತ್ಮಾಪ್ರವಚನೇ ನ ಲಭ್ಯ, ನ ಮೇಧಯಾ ನ ಬಹು ನಾ ಶ್ರುತೇನ ಯಮ್ಮೈವೇಷ ವೃಣುತೇ ತೇನ ಲಭ್ಯ ಎಂಬ ಕಠೋಪನಿಷತ್ತಿನ ಮಂತ್ರ ಭಾವವನ್ನು ಮನಸ್ಸಿನಲ್ಲಿಟ್ಟುಕೊಂಡು ಸ್ತುತಿಸಿ ಶಿವ ಜಪವನ್ನು ಮಾಡಿ ಅವನ ದಿವ್ಯಸ್ವರೂಪವನ್ನು ಹೃದಯಕಮಲದಲ್ಲಿ ಸದಾ ನೆಲೆಸುವಂತೆ ಮಾಡುವುದು ಮಕ್ಕಳಾಟವಲ್ಲವೆಂದಿದ್ದಾರೆ

ದೇವಾದಿದೇವ ಎಂಬ ಸಿಂಧುನಾಮಕ್ರಿಯರಾಗದ ಕೃತಿಯಲ್ಲಿ ಚಂದ್ರಕಲಾಧರನಾದ ಸದಾ ಶಿವನನ್ನು ದೀನಬಂಧುವಾದ ಅವನ ಪಾದ ಭಕ್ತಿಯನ್ನು ಕರುಣಿಸಬೇಕೆಂದು ಪ್ರಾರ್ಥಿಸಿದ್ದಾರೆ ಶಂಭೋ ಶಿವಶಂಕರಾ ಎಂಬ ಶಂಕರಾಭರಣರಾಗದ ದಿವ್ಯನಾಮ ಕೀರ್ತನೆಯಲ್ಲಿ ಮೃದು ಮಧುರವಾದ ಪದಗುಂಫನ ಮತ್ತು ಶಬ್ದಾಲಂಕಾರ ಸಮನ್ವಿತವಾದ ರೀತಿಯಲ್ಲಿ ಹಿಮಗಿರಿಜಾರಮಣನೂ ಸುರಸೇವಿತನೂ ನಿಗಮ ಸನ್ನಿಹಿತನೂ ಕರುಣಾಂತರಂಗನೂ ಆದ ಈಶ್ವರನನ್ನು ಮತಭೇದ ಪತಿತ ಮಾನವಮದ ಸಂತತ ಭಂಗ ನೆಂದು ಸ್ತುತಿಸಿದ್ದಾರೆ ಶಿವಶಿವಯೆನರಾದ ಎಂಬ ಪಂತುವರಾಳ ರಾಗದ ಕೃತಿಯಲ್ಲಿ - ಸಂಸಾರದ ಭಯ ಬಾಧೆಗಳನ್ನೂ ಕಾಮಾದಿ ವಿಕಾರಗಳನ್ನೂ ನಿವಾರಣೆಮಾಡಿಕೊಳ್ಳಲು ಶಿವಶಿವ ಎಂದೇಕೆ ಜಪಿಸಬಾರದು ಎಂದೂ ಶಿವಾಪರಾಧಮು ಎಂಬ ಸಾಮರಾಗದ ಕೃತಿಯಲ್ಲಿ - ಭಗವಂತನು ಒಬ್ಬನೇ ಅವನ ರೂಪ ಹಲವು ಎಂದು ತ್ರಿಮೂರ್ತಿ ತತ್ವವನ್ನು ಮನಸ್ಸಿನಲ್ಲಿಟ್ಟುಕೊಂಡು ಭಜನೆ ಸಮಾರಾಧನೆ ಜಪ ಇತ್ಯಾದಿಗಳೇನೇ ಮಾಡಿದರೂ ಶಿವಾಪರಾಧ ಮಾಡುವವರಿಗೆ ಭವಸಾಗರವನ್ನು ದಾಟುವ ಉಪಾಯವು ತಿಳಿಯುವುದಿಲ್ಲ ಮತ್ತು ಮೋಕ್ಷವು ದೊರಕುವುದಿಲ್ಲವೆಂದಿದ್ದಾರೆ

ವಿಧಿ ಏಮಿ ಎಂಬ ಪಂತುವರಾಳಿ ರಾಗದ ಕೃತಿಯಲ್ಲಿ ಪ್ರಣತಾರ್ಥಿ ಹರನಾದ ಪರಮಶಿವನ ಮಹಿಮೆಯನ್ನು ಸ್ತುತಿಸಿ ಶಿವನಲ್ಲಿ ಅಚಲ ಭಕ್ತಿಯುಳ್ಳವರನ್ನು ವಿಧಿಯೂ ಸಹ ಏನೂ ಮಾಡಲಾರದು ಎಂದು ನಾದ ಮತ್ತು ಯೋಗ ವಿದ್ಯೆಗಳ ಮಹಿಮೆಯನ್ನು ಕೀರ್ತಿಸಿದ್ದಾರೆ

## ದೇವಿ

ಅನೇಕರು ಪರತತ್ವವನ್ನು ದಯಾಸ್ವರೂಪಿಣಿಯಾದ ಪರಾಶಕ್ತಿಯೆಂದು ಭಾವಿಸಿ ಉಪಾಸಿಸಿದ್ದಾರೆ ಶ್ರೀರಾಮನ ನಿಜಭಕ್ತರಾದ ತ್ಯಾಗರಾಜ ಸ್ವಾಮಿಯು ಭೇದಭಾವವಿಲ್ಲದೆ ಅದೇ ಭಕ್ತಿ ಭಾವದಿಂದ ಇತರ ದೈವಗಳನ್ನು ಸ್ತುತಿಸಿದ್ದಾರೆ ಪಂಚನದ ಕ್ಷೇತ್ರದ ಪರಮೇಶ್ವರಿಯನ್ನು ಹಲವಾರು ಕೃತಿಗಳಲ್ಲಿ ಸ್ತುತಿಸಿದ್ದಾರೆ

ತಾಯಿಯಾದ ಧರ್ಮಸಂವರ್ಧನಿಯನ್ನುನಂಬಿ ಮನಸಾರ ಅವಳ ಪಾದಯುಗಳಗಳಲ್ಲಿ ಶರಣು ಹೋಗಿದ್ದಾರೆ (ಅಂಬ ನಿನ್ನು - ಆರಭಿ) ತನ್ನನ್ನು ಕಾಪಾಡಲು ಈ ಜಗತ್ತಿನಲ್ಲಿ ಯಾರಿದ್ದಾರೆ? ಸದಾ ಅವಳ ದರ್ಶನಾನುಭವವನ್ನು ಕರುಣಿಸುವಂತೆ ಕಾವೇರೀತೀರನಿವಾಸಿಯಾದ ಪರಾತ್ಪರಿಯನ್ನು ಅಮ್ಮ ಧರ್ಮಸಂವರ್ಧನಿ ಎಂಬ ಅಠಾಣರಾಗದ ಕೃತಿಯಲ್ಲಿ ಅವಳ ಕಲ್ಯಾಣಗುಣಗಳನ್ನೂ ವೈಭವವನ್ನೂ ಕೀರ್ತಿಸಿ ಪ್ರಾರ್ಥಿಸಿದ್ದಾರೆ ಪರಾಶಕ್ತಿ ಎಂಬ ಸಾವೇರಿ ರಾಗದ ಕೃತಿಯಲ್ಲಿ ಇಂದ್ರ ಬ್ರಹ್ಮಾದಿಗಳು ಪ್ರಾರ್ಥಿಸಿದಾಗ ವರನೀಡುವ ಆ ತಾಯಿಯ ರಕ್ಷಣೆಯನ್ನು ಬೇಡಿದ್ದಾರೆ ನೀವು ಬ್ರೋವವಲೇ ಎಂಬ ಸಾವೇರಿ ರಾಗದ ಮತ್ತೊಂದು ಕೃತಿಯಲ್ಲಿ ನಿಖಿಲ ಲೋಕ ಜನನಿಯೂ ಕರುಣಾಸಾಗರಿಯೂ ರಾಜರಾಜೇಶ್ವರಿಯೂ ಸಕಲ ಲೋಕಾಧಾರಶಕ್ತಿಯೂ ಆದ ಆ ತಾಯಿಯ ದಿವ್ಯಮಹಿಮೆಯನ್ನು ಸಾಮಾನ್ಯರು ತಿಳಿಯಲಾರರು ಎಂದು ಹೇಳಿ ನಿಷ್ಕಪಟದಿಂದ ಲೋಕವನ್ನು ಪರಿಪಾಲಿಸುವ ಆ ಮಹಾರಾಜ್ಞಿಯನ್ನು ನಂಬಿ ದರ್ಶನವನ್ನು ಪ್ರಾರ್ಥಿಸಿದ್ದಾರೆ ಕರುಣ ಜೂಡವಮ್ಮ ಎಂಬ ತೋಡಿ ರಾಗದ ಕೃತಿಯಲ್ಲಿ ಭೂಮಂಡಲದಲ್ಲಿ ಅಸಮಾನವಾದ ಪಂಚನಗರ ನಾಯಕಿಯಾದ ಧರ್ಮಸಂವರ್ಧನಿಯ ಪಾದಾರವಿಂದ ಭಕ್ತಿಯನ್ನು ಕರುಣಿಸಿ ತನ್ನನ್ನು ಅಪರಿಚಿತನೆಂದು ಕಾಣದೆ ಕಾಪಾಡಬೇಕೆಂದು ಪ್ರಾರ್ಥಿಸಿದ್ದಾರೆ

ವಿಧಿಶಕ್ರಾದುಲಕು ಎಂಬ ಪಂತುವರಾಳಿ ರಾಗದ ಕೃತಿಯಲ್ಲಿ ತಿರುವೈಯ್ಯಾರಿನ ತಾಯಿ ಧರ್ಮಾಂಬಿಕೆಯ ಶುಕ್ರವಾರದ ಸೇವಾವೈಭವವನ್ನು ವರ್ಣಿಸಿ ಶೃಂಗಾರರಸಾಧಿದೇವತೆಯಾದ ಆ ತಾಯಿಯ ದರ್ಶನವು ಬ್ರಹ್ಮಾದಿಗಳಿಗೂ ಸಹ ಲಭಿಸುವುದು ದುರ್ಲಭವೆಂದು ಕೀರ್ತಿಸಿ ಕರುಣಾಮಯಿಯಾದ ಆ ತಾಯಿಯ ದಯೆಯನ್ನು ಬೇಡಿದ್ದಾರೆ ಶಿವೇ ಪಾಹಿಮಾಂ ಎಂಬ ಕಲ್ಯಾಣಿರಾಗದ ಕೃತಿಯಲ್ಲಿ ಆ ತಾಯಿಯು ಸರ್ವವೇದ ಸಾರವಾದ ಓಂಕಾರದ ಅರ್ಥವಾಗಿರುವವಳು ವಿಷ್ಣುಮಾಯಾ ವಿಲಾಸಿನಿ ಮತ್ತು ಚರಾಚರ ಪ್ರಪಂಚವು ಅವಳ ಸ್ವರೂಪವೆಂದು ಸ್ತುತಿಸಿದ್ದಾರೆ ಬಾಲೇ ಬಾಲೇಂದು ಭೂಷಣೀ ಎಂಬ ರೀತಿ ಗೌಳರಾಗದ ಕೃತಿಯಲ್ಲಿ ತನ್ನನ್ನು ಪುತ್ರನೆಂದು ಭಾವಿಸಿ ಮಾತೃವಾತ್ಸಲ್ಯದಿಂದ ಅನುಗ್ರಹಿಸಬೇಕೆಂದು ಮತ್ತು ತನ್ನ ಜನ್ಮಾಂತರ ಭಾಗ್ಯದಿಂದ ಆ ಪರದೇವತೆಯ ಸಾನ್ನಿಧ್ಯವನ್ನು ಅನುಭವಿಸಿ ಶ್ರೀರಾಮನೊಡನೆ ಬಾಂಧವ್ಯವನ್ನು ಸೂಚಿಸಿ ಕೀರ್ತಿಸಿದ್ದಾರೆ ಇನ್ನಾಳ್ಲವಲೆ ಎಂಬ ದೇಶ್ಯತೋಡಿರಾಗದ ಕೃತಿಯಲ್ಲಿ ಅಳುತ್ತಿರುವ ಮಗುವಿನ ಕಡೆಗೆ ತಾಯಿಯು ಓಡಿ ಬರುವಂತೆ ಬಂದು ತನ್ನನ್ನು ರಕ್ಷಿಸಬೇಕೆಂದೂ ತನ್ನ ಬೇಡಿಕೆಯ ಕೇವಲ ಕೂಗು ಎಂದು ಭಾವಿಸಬಾರದೆಂದು ಆ ಪರದೇವತೆಯನ್ನು ಪ್ರಾರ್ಥಿಸಿದ್ದಾರೆ ನನ್ನು ಕನ್ನತಲ್ಲಿ ಎಂಬ ಕೇಸರಿರಾಗದ ಸುಂದರವಾದ ಕೃತಿಯಲ್ಲಿ ರಮಾಪತಿ ಸೋದರಿಯೂ ನಾರಾಯಣಿಯೂ ಆದ ಧರ್ಮಾಂಬಿಕೆಯಲ್ಲದೆ ತನ್ನನ್ನು ಇನ್ಯಾರು ಕಾಪಾಡುತ್ತಾರೆ ಎಂದು ಕೀರ್ತಿಸಿದ್ದಾರೆ ಅಂಬ ನಿನ್ನು ನಮ್ಮಿತಿ' ಎಂಬ ಆರಭಿರಾಗದ ಕೃತಿಯಲ್ಲಿ ತನ್ನ ನಿಶ್ಚಲಭಕ್ತಿಯ ಬಗ್ಗೆ ಸಂದೇಹ ಪಡಬಾರದೆಂದು ತಾಯಿಯಾದ ಧರ್ಮಸಂವರ್ಧನಿಯನ್ನು ಪ್ರಾರ್ಥಿಸಿದ್ದಾರೆ

ತ್ಯಾಗರಾಜಸ್ವಾಮಿಯು ನಾಗಪಟ್ಟಣಕ್ಕೆ ಭೇಟಿಯಿತ್ತಾಗ ಅಲ್ಲಿಯ ಅಧಿದೇವತೆಯಾದ ನೀಲಾಯತಾಕ್ಷಿಯನ್ನು ಸ್ತುತಿಸಿ, ಅವಳ ಅನುಗ್ರಹವೇ ತನ್ನ ಐಶ್ವರ್ಯವೆಂದು ತಿಳಿದು ತಾನು ನಿಜದಾಸನಾಗಿ ಅವಳ ಸನ್ನಿಧಿಗೆ ಬಂದಿರುವುದಾಗಿಯೂ ಎವರು ತೆಲಿಯಬೊಯ್ಯೇರು ಎಂಬ ತೋಡಿರಾಗದ ಕೃತಿಯಲ್ಲಿ ನಾಗಭೂಷಣನರಾಣಿಯಾದ ನೀಲಾಯತಾಕ್ಷಿಯ ಮಹಿಮೆಯನ್ನು ಸಂಪೂರ್ಣವಾಗಿ ಅರಿಯಲು ಸಾಧ್ಯವೇ ಎಂದು ಆ ತಾಯಿಯ ದರ್ಶನದಿಂದ ಪುಳಕಿತರಾಗಿ ಉದ್ಗರಿಸಿ ಸ್ತುತಿಸಿದ್ದಾರೆ

ಶಿಷ್ಯ ಲಾಲ್ಗುಡಿ ರಾಮಯ್ಯರ್‌ರವರ ಕೋರಿಕೆಯಂತೆ ಲಾಲುಡಿಗೆ ಬೇಟಿಯಿತಾಗ ಅಲ್ಲಿಯ ಅಧಿ

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

### ದರ್ಶನ ಹಾಗೂ ಸೇವಾ ವಿವಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ ೫ ೦೦ | ಪ್ರಾ ೫ ೩೦ |
| ವಿಶ್ವರೂಪ ಸರ್ವದರ್ಶನ* | ಪ್ರಾ ೫ ೩೦ | ಪ್ರಾ ೭ ೦೦ |
| ತೋಮಾಲ ಸೇವೆ | ಪ್ರಾ ೭ ೩೦ | ಪ್ರಾ ೮ ೦೦ |
| (ಆರ್ಜಿತ) ಅರ್ಚನೆ | ಪ್ರಾ ೮ ೦೦ | ಪ್ರಾ ೮ ೩೦ |
| (ಆರ್ಜಿತ) ಸರ್ವದರ್ಶನ | ಪ್ರಾ ೯ ೦೦ | ಮ ೧೨ ೩೦ |
| | ಮ ೧-೦೦ | ಸಂ ೬ ೦೦ |
| | ರಾ ೭ ೦೦ | ರಾ ೮ ೪೫ |
| ಏಕಾಂತಸೇವೆ | | ರಾ ೯ ೦೦ಕ್ಕೆ |

* ಶುಕ್ರವಾರ ಏಕಾದಶಿ ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ ೫ ೩೦ ರಿಂದ ಪ್ರಾ ೬ ೩೦ ರ ವರೆಗೆ ಮಾತ್ರ

### ಆರ್ಜಿತ ಸೇವೆಗಳು

| | | |
|---|---|---|
| ೧ | ಗರುಡವಾಹನ | ೩೨ ೦೦ |
| ೨ | ಚಂದ್ರಪ್ರಭ ವಾಹನ | ೩೨ ೦೦ |
| ೩ | ಗಜವಾಹನ | ೩೨ ೦೦ |
| ೪ | ಅಶ್ವವಾಹನ | ೩೨ ೦೦ |
| ೫ | ಸಿಂಹವಾಹನ | ೩೨ ೦೦ |
| ೬ | ಹಂಸವಾಹನ | ೩೨ ೦೦ |
| ೭ | ಚಿಕ್ಕಶೇಷವಾಹನ | ೩೨ ೦೦ |
| ೮ | ದೊಡ್ಡ ಶೇಷವಾಹನ | ೬[illegible] ೦೦ |
| ೯ | ಸೂರ್ಯಪ್ರಭವಾಹನ | ೬೨ ೦೦ |

### ಪಡಿಪ್ರಸಾದಗಳು

| | | |
|---|---|---|
| ೧ | ದೋಸೆ ಕಾಲಸೋಲ | ೩೫ ೦೦ |
| ೨ | ದಧ್ಯೋದನ | ೪೦ ೦೦ |
| ೩ | ಪುಳಿಯೋಗರೆ | ೫೦ ೦೦ |
| ೪ | ಪೊಂಗಲು | ೫೫ ೦೦ |
| ೫ | ಸಕ್ಕರೆಪೊಂಗಲ್ | ೬೫ ೦೦ |
| ೬ | ಶಾಕರ ಬಾತ್ | ೮೫ ೦೦ |
| ೭ | ಕೇಸರಿಭಾತ್ | ೯೦ ೦೦ |
| ೮ | ಶೀರ | ೧೫೫ ೦೦ |

ವಿವರಗಳಿಗೆ
**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ
ತಿರುಪತಿ

ದೇವತೆಯಾದ ಪ್ರವೃದ್ಧ ಶ್ರೀಮತಿಯನ್ನು ಲಲಿತೇ ಶ್ರೀ ಪ್ರವೃದ್ಧೇ ಎಂಬ ಭೈರವಿರಾಗದ ಕೃತಿಯನ್ನು ಹಾಡಿ ಧರ್ಮಸಂವರ್ಧಿನಿ ಪರ್ವತವರ್ಧಿನಿ ಇತ್ಯಾದಿ ಪರಮ ಸೌಭಾಗ್ಯ ಸಂಕೇತವಾದ ಹೆಸರುಳ್ಳ ಆ ದೇವಿಯನ್ನು ಸ್ತುತಿಸಿ ಹರಿಯೊಡನೆ ಸಂಬಂಧವನ್ನು ಸೂಚಿಸಿ ಆ ಶುಭಪದನೆಯ ದಾಸನಾಗಿ ಅವಳೇಗತಿ ಎಂದು ಶರಣಾರ್ಥಿಯಾಗಿ ಬಂದಿರುವುದಾಗಿ ಅವಳ ಅನುಗ್ರಹಕ್ಕಾಗಿ ಪ್ರಾರ್ಥಿಸಿದ್ದಾರೆ ಗತಿ ನೀವನಿ ಎಂಬ ತೋಡಿರಾಗದ ಕೃತಿಯನ್ನು ಹಾಡಿ ಪರಮಾರ್ಥವುಳ್ಳ ದೃಢಚಿತ್ತವನ್ನು ಅನುಗ್ರಹಿಸಲು ತಡಮಾಡಬೇಡವೆಂದೂ ಮಹಿತ ಪ್ರವೃದ್ಧ ಶ್ರೀಮತಿ ಎಂಬ ಕಾಂಭೋಜಿರಾಗದ ಕೃತಿಯನ್ನು ಹಾಡಿ ವಿಷ್ಣುವಿನ ಸೋದರಿ ಮತ್ತು ಸರ್ವಜನನಿಯಾದ ತಪಸ್ತೀರ್ಥಪುರನಿವಾಸಿಯಾದ ಶ್ರೀಮತಿ ದೇವಿಯನ್ನು ತನಗೆ ಭಕ್ತಿ ಭಾಗ್ಯವಿತ್ತು ಕಾಪಾಡಬೇಕೆಂದು ಪ್ರಾರ್ಥಿಸಿ ಸ್ತುತಿಸಿದ್ದಾರೆ ಈ ಕೃತಿಗಳು ಲಾಲ್ಗುಡಿ ಪಂಚರತ್ನವೆಂದು ಪ್ರಸಿದ್ಧವಾದ ಐದು ಕೃತಿಗುಚ್ಛಕ್ಕೆ ಸೇರಿವೆ

ತ್ಯಾಗರಾಜಸ್ವಾಮಿಯು ತಮ್ಮ ಶಿಷ್ಯವೀಣಾ ಕುಪ್ಪಯ್ಯರ್‌ರ ಪ್ರಾರ್ಥನೆ ಮೇರೆಗೆ ಮದ್ರಾಸಿನ ಸಮೀಪದಲ್ಲಿರುವ ತಿರುವತ್ತಿಯೂರಿಗೆ ಭೇಟಿಯಿತ್ತು ಅಲ್ಲಿಯ ದೇವಾಲಯದಲ್ಲಿ ತ್ರಿಪುರಸುಂದರಿ ಅಮ್ಮನವರ ಸಾನ್ನಿಧ್ಯದಿಂದ ಪುಳಕಿತರಾಗಿ ಹಾಡಿದ ಐದು ಕೃತಿಗಳು ತಿರುವತ್ತಿಯೂರು ಪಂಚರತ್ನವೆಂದು ಪ್ರಸಿದ್ಧವಾಗಿವೆ ಸುಂದರಿ ನೀ ಎಂಬ ಕಲ್ಯಾಣಿರಾಗದ ಕೃತಿಯಲ್ಲಿ ತ್ರಿಪುರ ಸುಂದರಿ ದೇವಿಯ ಶುಕ್ರವಾರದ ಪ್ರಸಿದ್ಧವಾದ ಪೂಜೆಯ ದರ್ಶನ ಭಾಗ್ಯ ದೊರಕಿದುದು ತಮ್ಮ ಪೂರ್ವಜನ್ಮದ ಸುಕೃತ ಮತ್ತು ಅಮ್ಮನವರ ಕಟಾಕ್ಷ ಬಲ ದೇವಿಯ ದರ್ಶನದಿಂದ ತಮಗೆ ಬ್ರಹ್ಮಾನಂದವಾಗಿದೆ ಎಂದು ಭಕ್ತಿಯಿಂದ ಕೀರ್ತಿಸಿದ್ದಾರೆ ಸುಂದರಿ ನನ್ನಿಂದರಿಲೋ ಎಂಬ ಬೇಗಡೆರಾಗದ ಕೃತಿಯಲ್ಲಿ ತ್ರಿಪುರಸುಂದರಿ ಅಮ್ಮನವರನ್ನು ಭಕ್ತಿಯಿಂದ ಸ್ತುತಿಸುತ್ತಾ ಅನೇಕ ವಿಶೇಷಣಗಳಿಂದ ವರ್ಣಿಸಿ ತನ್ನನ್ನು ಅನುಗ್ರಹಿಸಬೇಕೆಂದು ಆ ತಾಯಿಯ ಪಾದ ಭಕ್ತಿಯನ್ನು ಪ್ರಾರ್ಥಿಸಿದ್ದಾರೆ ಸುಂದರಿ ನಿನು ವರ್ಣಿಂಪ ಎಂಬ ಆರಂಭಿರಾಗದ ಕೃತಿಯಲ್ಲಿ ಪಂಡಿತ ಜನರಂಜಕವಾದ ರೀತಿಯಲ್ಲಿ ವರ್ಣಿಸಿ ಸಕಲ ಚರಾಚರ ಪ್ರಕೃತಿ ಸೌಭಾಗ್ಯವು ಆ ಪರದೇವತೆಯೆಂದೂ ಅವಳನ್ನು ವರ್ಣಿಸಲು ಬ್ರಹ್ಮಾದಿಗಳಿಗೂ ಸಾಧ್ಯವಿಲ್ಲವೆಂದೂ, ಸರ್ವಮಂಗಳ ದೇವಿಯ ಮಹಿಮೆಯು ಭಕ್ತರ ಪಾಪಗಳನ್ನೆಲ್ಲಾ ನಿವಾರಿಸಿ ಕಾಪಾಡುವುದೆಂದೂ ಅವಳು ಶ್ರೀರಾಮನ ತಂಗಿಯೆಂದು ನಿರೂಪಿಸಿ ಅವಳ ಪಾದಾರವಿಂದಗಳ ಧ್ಯಾನಮಾಡುವುದೇ ಅಮೂಲ್ಯವಾದ ಐಶ್ವರ್ಯವೆಂದು ಕೀರ್ತಿಸಿದ್ದಾರೆ ತ್ಯಾಗರಾಜಸ್ವಾಮಿಯು ಆಶುಕವಿಯೂ ಸರಸಕವಿತಾಧುರೀಣರು ಎಂಬುದಕ್ಕೆ ಈ ಕೃತಿಯಲ್ಲಿರುವ ವರ್ಣನೆಯು ನಿದರ್ಶನ ದಾರಿನಿ ತೆಲಸುಕೊಂಟಿ ಎಂಬ ಶುದ್ಧಸಾವೇರಿರಾಗದ ದೀರ್ಘವಾದ ಕೃತಿಯು ಬಹಳ ಪ್ರಸಿದ್ಧವಾಗಿದೆ ದಶರಥ ಕುಮಾರನ ಸೋದರಿ ಮತ್ತು ದಯಾಪರಿಯಾದ ತಾಯಿ ತ್ರಿಪುರಸುಂದರಿಯ ಜಪವೇ ಮುಕ್ತಿ ಮಾರ್ಗವೆಂದು ಅರಿತುದಾಗಿ ಹೇಳಿ, ದೇವಿಯ ದರ್ಶನಾನಂದವನ್ನೂ ಮಹಿಮೆಯನ್ನೂ ಕೀರ್ತಿಸಿದ್ದಾರೆ ಕನ್ನತಲ್ಲಿ ಎಂಬ ಸಾವೇರಿ ರಾಗದ ಕೃತಿಯಲ್ಲಿ ತ್ರಿಪುರಸುಂದರಿ ಅಮ್ಮನವರನ್ನು ಭಕ್ತಿಯಿಂದ ಸ್ತುತಿಸಿ ಆ ತಾಯಿಯೇ ಸಕಲವೂ ಎಂದು ತಿಳಿದು ಎಲ್ಲ ಸತ್ಕರ್ಮವನ್ನು ಅವಳಿಗೆ ಸಮರ್ಪಿಸಿ ಆ ಪರದೇವತೆಯೇ ಸಕಲರಿಗೂ ಪರಮಾಶ್ರಯವೆಂದು ಬೋಧಿಸಿದ್ದಾರೆ ವಿನಾಯಕುನಿ ಎಂಬ ಮಧ್ಯಮಾವತಿ ಕೃತಿಯಲ್ಲಿ ಕಾಂಚೀಪುರದಲ್ಲಿ ನೆಲೆಸಿರುವ ಶ್ರೀ ಕಾಮಾಕ್ಷಿ ದೇವಿಯನ್ನು ರಾಮಸೋದರಿ ಎಂದು ತನ್ನ ಉಪಾಸ್ಯದೈವವಾದ ಶ್ರೀರಾಮನ ಅನುಬಂಧವನ್ನು ಸೂಚಿಸಿ ವಿನಾಯಕನನ್ನು ವಾತ್ಸಲ್ಯದಿಂದ ರಕ್ಷಿಸಿದಂತೆ ತನ್ನನ್ನು ರಕ್ಷಿಸಬೇಕೆಂದೂ ಮಧ್ಯಾರ್ಜುನ ಕ್ಷೇತ್ರದಲ್ಲಿ ಒಬ್ಬ ಮೂಕ ಕವಿಗೆ ಸಮಸ್ತ ವಾಕ್‌ಶಕ್ತಿಯನ್ನು ಅನುಗ್ರಹಿಸಿದ್ದನ್ನು ಸ್ಮರಿಸಿ ಆ ಪರದೇವತಾ ಕಟಾಕ್ಷವನ್ನು ತನಗೂ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದ್ದಾರೆ

ಯೋ ಯೋ ಯಾಂ ಯಾಂ ತನುಂ ಭಕ್ತ ಶ್ರದ್ಧಯಾರ್ಚಿತು ಮಿಚ್ಛತಿ । ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥ ಎಂಬ ಗೀತಾವಾಕ್ಯವನ್ನು ಇಲ್ಲಿ ಸ್ಮರಿಸಬಹುದು ಸರ್ವ ದೇವ ನಮಸ್ಕಾರ ಕೇಶವಂ ಪ್ರತಿಗಚ್ಛತಿ ॥ ಎಂಬಂತೆ ಭಗವಂತನು ಒಬ್ಬನೇ ಅವನ ಅನೇಕ ರೂಪಗಳನ್ನು ಉಪಾಸಕರು ತಮ್ಮ ಅಭಿರುಚಿಗೆ ತಕ್ಕಂತೆ ಉಪಾಸನೆ ಮಾಡುತ್ತಾರೆ ತ್ಯಾಗರಾಜಸ್ವಾಮಿಯು ಆಯಾ ಕ್ಷೇತ್ರಗಳ ಅಧಿದೇವತೆಗಳನ್ನು ಪ್ರಾರ್ಥಿಸಿ ಸ್ತುತಿಸುವಾಗ ಶ್ರೀರಾಮನ ಸಂಬಂಧವನ್ನು ಸೂಚಿಸಿ ಶಿವ ಮತ್ತು ವಿಷ್ಣುವಿನಲ್ಲಿ ಭೇದವಿಲ್ಲವೆಂದು ಹೇಳಿ ಸಮರ್ಪಣಭಾವದಿಂದ ಸಮಾನ ಭಕ್ತಿಯನ್ನು ಈ ಕೃತಿಗಳಲ್ಲಿ ಸುಂದರ ಹಾಗೂ ಹೃದಯಂಗಮವಾದ ರೀತಿಯಲ್ಲಿ ಪ್ರಕಟಿಸಿದ್ದಾರೆ

****

# ಭೃಗುಮಹರ್ಷಿ

## ಭೃಗುವಂಶ ಪರಂಪರೆ

ಮಹಾಭಾರತದ ಆದಿ ಪರ್ವ ಐದನೆಯ ಅಧ್ಯಾಯದಲ್ಲಿ ಪುರಾಣಿಕರಾದ ಶೌನಕ ಮಹರ್ಷಿಗಳ ಅಪ್ಪಣೆಯಂತೆ ಪರಮ ಶ್ರೇಷ್ಠನಾದ ಉಗ್ರಶ್ರವರು ಭೃಗು ವಂಶದ ಕಥೆಯನ್ನು ಹೇಳುತ್ತಾರೆ ಪುರಾಣಗಳಲ್ಲಿ ಉಕ್ತವಾಗಿರುವ ಭೃಗು ವಂಶದ ಚರಿತ್ರೆ ಪರಮ ಪವಿತ್ರವಾಗಿದೆ ಭೃಗುಮಹರ್ಷಿಗಳು ಸಾಕ್ಷಾತ್ ಬ್ರಹ್ಮನು ಆಚರಿಸಿದ ವಾರುಣಯಜ್ಞದ ಅಂಶದಿಂದ ಹುಟ್ಟಿದ ಬ್ರಹ್ಮರ್ಷಿ ಸ್ವಾಯಂಭುವ ಮನ್ವಂತರದಲ್ಲಿದ್ದ ಮಹಾ ತಪಸ್ವಿ ಬ್ರಹ್ಮವಿದ ವೇದಪುರುಷ ಸತ್ಯವಾದಿ ಈತನ ಪತ್ನಿ ಪುಲೋಮೆ ಅಮಿತ ತೇಜಸ್ವಿ ಚ್ಯವನರು ಭೃಗು ಮಹರ್ಷಿಗಳಿಗೆ ಪುಲೋಮೆಯಲ್ಲಿ ಜನಿಸಿದರು ಚ್ಯವನರಲ್ಲದೆ ವಜ್ರಶೀರ್ಷ ಶುಚಿ ಔರ್ವ ಶುಕ್ರ ವರೇಣ್ಯ ಸವಣರೆಂಬ ಇನ್ನು ಆರು ಮಂದಿ ಪುತ್ರರು ಹುಟ್ಟಿದರು ಮಹರ್ಷಿ ಜಮದಗ್ನಿ ಶುಕ್ರ ದಧೀಚಾದಿ ಮಹರ್ಷಿಗಳ ಮೂಲ ಪುರುಷ ಭೃಗು ಮಾಡಿದ ಮಹತ್ ಉಪಕಾರವೆಂದರೆ ಕಲಿಯುಗದಲ್ಲಿ ಭಗವಂತನು ನಾಕ್ಷಾತ್ತಾಗಿ ವೈಕುಂಠವನ್ನು ತೊರೆದು ತಿರುಮಲೆಯಲ್ಲಿ ವೆಂಕಟಾಚಲಪತಿಯಾಗಿ ನೆಲೆಸಿದ ಮಹತ್ಕಾರ್ಯ ಭವಿಷ್ಯೋತ್ತರ ಪುರಾಣದ ಎರಡನೆಯ ಅಧ್ಯಾಯದಲ್ಲಿ

ಪುರಾತು ಋಷಯ ಸರ್ವೇ
ಕಶ್ಯಪಾದ್ಯಾ ಮುನೀಶ್ವರಾ |
ಸನ್ಮಖಂ ಜಾಹ್ನವೀ ತೀರೇ
ಸಂತೋಷಾಚ್ಚಕ್ರಿರೇ ದ್ವಿಜಾ"

ಎಂಬುವುದಾಗಿ ಹಿಂದೆ ಮಹರ್ಷಿಗಳು ಜಾಹ್ನವೀ ತೀರದಲ್ಲಿ ಯಜ್ಞವನ್ನು ಮಾಡುತ್ತಿರುವಾಗ ಮಹರ್ಷಿ ನಾರದರು ಬಂದು ನೀವು ಮಾಡುವ ಯಜ್ಞ ಫಲವನ್ನು ಯಾರು ಭುಜಿಸುತ್ತಾರೆ ದೇವತೆಗಳಲ್ಲಿ ಅತಿ ಶ್ರೇಷ್ಠನು ಯಾರೋ ಅವನಿಗೆ ಅರ್ಪಿತಾವಾಗಲಿ ಎಂಬುವುದಾಗಿ ತಿಳಿಸಿದಾಗ ಸಂಶಯಾತ್ಮರಾದ ಋಷಿಗಳು ಅಲ್ಲಿ ತೇಜಸ್ವಿಯಾದ ಭೃಗು ಮಹರ್ಷಿಯನ್ನು ಪ್ರಾರ್ಥಿಸಲಾಗಿ ಭೃಗು ತಾನು ಮೂರುಲೋಕವನ್ನು ಸಂಚರಿಸಿ ಋದ್ವಾಗಿ ಯಾರು ಶ್ರೇಷ್ಠರು ಎಂಬುವುದನ್ನು ನಿರ್ಣಯಿಸುವುದಾಗಿ ತಿಳಿಸಿ ಮೊದಲು ಬ್ರಹ್ಮಲೋಕಕ್ಕೆ ಹೋದನು ಅಲ್ಲಿ

"ತತ್ರ ದೃಷ್ಟ್ವಾಷ್ಟಬಾಹುಂ
ತಂ ಸಾಕ್ಷಾತ್ ಬ್ರಹ್ಮಣಮಗ್ರಜಮ್
ಚತುರ್ಮುಖ ಮುದಾರಾಂಗಂ
ಸರಸ್ವತ್ಯಾ ಸುಸೇವಿತಂ"

(ಸರಸ್ವತೀ ದೇವಿಯಿಂದ ಸೇವಿಸಲ್ಪಟ್ಟವನಾಗಿ ನಾಲ್ಕು ಮುಖಗಳಿಂದ ವೇದಗಳನ್ನೂ ಶ್ರೀಮನ್ನಾರಾಯಣನನ್ನೂ ಸ್ತೋತ್ರಮಾಡುವ ಬ್ರಹ್ಮನಿಗೆ) ಭೃಗುಮಹರ್ಷಿ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ ನಿಂತರೂ ಬ್ರಹ್ಮನು ಭೃಗು ಮಹರ್ಷಿಗಳಿಗೆ ಪ್ರತಿವಂದನೆ ಮಾಡದಿರಲು ಭೃಗುವು ಬ್ರಹ್ಮನಿಗೆ ಯಾರೂ ಪೂಜಿಸದಿರಲಿ ಎಂಬುವುದಾಗಿ ಶಾಪ ಕೊಟ್ಟು ಕೈಲಾಸಕ್ಕೆ ಹೊರಟನು ಕೈಲಾಸದಲ್ಲಿ ಮುಕ್ಕಣ್ಣನು ಪಾರ್ವತೀದೇವಿಯೊಡನೆ ಕಾಮುಕನಾಗಿ ಕ್ರೀಡಿಸುತಲಿದ್ದನು ತನ್ನನ್ನು ಲಕ್ಷಿಸದೇ ಕಾಮುಕನಾಗಿದ್ದ ತ್ರಿಲೋಚನನ್ನು ನಿನ್ನ ಅಂಗ ಪೂಜೆಗಿಂತ ಜನರು ಲಿಂಗ ಪೂಜೆಯನ್ನೇ ಮಾಡಲಿ ಎಂಬುವುದಾಗಿ ಶಪಿಸಿ ಕೈಲಾಸವನ್ನು ತೊರೆದು ವೈಕುಂಠಕ್ಕೆ ಹೊರಟನು

ತತ್ರ ಶಯ್ಯಾ ಗೃಹೇ ರಮ್ಯೇ
ಶೇಷ ಮಂಚಕ ಶಾಯಿನಂ
ಲಕ್ಷ್ಮ್ಯಾಸಮೇತಂ ದೇವೇಶಂ
ದದರ್ಶಸ ಭೃಗುಸ್ತದಾ

ಶೇಷನ ಮೇಲೆ ಮಲಗಿರುವ ಶ್ರೀ ಲಕ್ಷ್ಮೀಸಹಿತನಾದ ಮಹಾವಿಷ್ಣುವನ್ನು ಕಂಡ ಭೃಗು ಮಹರ್ಷಿ ಕೋಪಗೊಂಡು ವಿಷ್ಣುವಿನ ವಕ್ಷಸ್ಥಲವನ್ನು ತನ್ನ ಕಾಲಿನಿಂದ ಒದ್ದನು ಮಹಾ ವಿಷ್ಣುವು ತಕ್ಷಣವೇ ಎದ್ದು ಹೇ ಮಹರ್ಷಿ ಅತಿ ಕಠಿಣವಾದ ದೇವ ಮಾನವರಿಗೂ ಅಭೇದ್ಯವಾದ ನನ್ನ ಶರೀರವನ್ನು ನಿಮ್ಮ ಕೋಮಲವಾದ ಪಾದ ಸ್ಪರ್ಶಿಸಿದಾಗ ಅಧಿಕ ಬಾಧೆ ಉಂಟಾಗಿರಬಹುದು ಕ್ಷಮಿಸಿ ಎಂದು ಉದಕದಿಂದ ಋಷಿಯ ಪಾದವನ್ನು ತೊಳೆದು ಶುದ್ಧೋದಕವನ್ನು ಲಕ್ಷ್ಮಿ ಹಾಗೂ ತನ್ನ ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಂಡನು ನಾರಾಯಣನ ಈ ಕೃತ್ಯವನ್ನು ಕಂಡ ಭೃಗು ಮಹರ್ಷಿ ಅಲ್ಲಿಂದ ಹೊರಟು ಋಷಿಗಳಿಗೆ ವಿಷ್ಣುವೇ ಸರ್ವೋತ್ತಮನೆಂದು ಸಾರಿ ಹೇಳಿದನು ಋಷಿಗಳು ತಮ್ಮ ಯಜ್ಞಫಲವನ್ನು ನಾರಾಯಣನಿಗೆ ಸಮರ್ಪಿಸಿದರು ತರುವಾಯ ವೈಕುಂಠದಲ್ಲಿ ಲಕ್ಷ್ಮಿಯು ನಾರಾಯಣನನ್ನು ಕುರಿತು

ಗಚ್ಛಾಮಿ ದೇವದೇವೇಶ
ತ್ಯಕ್ತ್ವಾ ತ್ವಾಂ ಜಗದೀಶ್ವರ |
ತಾಡಿತೋಽಸಿ ಜಗನ್ನಾಥ
ಋಷೀಣಾತ್ವಂ ಜಗನ್ಮಯ "

ನಾನು ಸದಾ ವಾಸಿಸುವ ನಿನ್ನ ವಕ್ಷಸ್ಥಲಕ್ಕೆ ಮಹರ್ಷಿ ಭೃಗು ಒದ್ದದ್ದರಿಂದ ನಿನ್ನನ್ನು ತೊರೆದು ನಾನು ಕರವೀರಪುರಕ್ಕೆ ಹೋಗುತ್ತಿರುವೆ" ಎಂದು ವಿಷ್ಣುವಿಗೆ ತಿಳಿಸಿ ಲಕ್ಷ್ಮಿಯು ಹೊರಟುಹೋದಳು

ಲಕ್ಷ್ಮಿಯು ವಿಷ್ಣುವನ್ನು ತೊರೆದಮೇಲೆ ವಿಷ್ಣುವ ಲಕ್ಷ್ಮಿಯನ್ನು ಸಂತೈಸಲು ವೈಕುಂಠವನ್ನು ಬಿಟ್ಟು ವೆಂಕಟಾದ್ರಿಗೆ ಬಂದು ನೆಲಸಿದ ಘಟ್ಟವನ್ನು ಭವಿಷ್ಯೋತ್ತರ ಪುರಾಣದಲ್ಲಿ ಮನೋಹರವಾಗಿ ವರ್ಣಿಸುವಾಗಿ

ಇತಿ ಸಂಕಲ್ಪ್ಯೋ (ಸಂಕಲ್ಪ) ಗೋವಿಂದೋ
ಲೀಲಾ ಮಾನುಷ ವಿಗ್ರಹ |
ಮಾಯಾವೀ ಪರಮಾನಂದಂ
ತ್ಯಕ್ತ್ವಾ ವೈಕುಂಠ ಮುತ್ತಮಂ |
ಗಂಗಾಯಾ ದಕ್ಷಿಣೇ ದೇಶೇ
ಯೋಜನಾನಾಂ ಶತತ್ರಯೇ |
ಸುವರ್ಣ ಮುಖರೀ ನಾಮ
ನದೀನಾಂ ಪ್ರವರಾನದಿ
ಶ್ರೀ ವೆಂಕಟಗಿರಿ ನಾಮ
ವರ್ತತೇ ಪುಣ್ಯಕಾನನ |
ಸುವರ್ಣಗಿರಿ ಪುತ್ರಸ್ತು
ಸರ್ವತೀರ್ಥ ಸಮನ್ವಿತ ||

ಗಂಗಾನದಿಗೆ ದಕ್ಷಿಣದಲ್ಲಿ ಮುನ್ನೂರುಯೋಜನ
ದೂರದಲ್ಲಿ ಸುವರ್ಣಮುಖೀ ನದಿಗೆ ಉತ್ತರದಲ್ಲಿ ಕ್ರೋಶದೂರದಲ್ಲಿ ಇರುವ ವೆಂಕಟಾದ್ರಿಯಲ್ಲಿ ತಲುಪಿ ಅಲ್ಲಿ ಸ್ವಾಮಿ ಪುಷ್ಕರಿಣಿಗೆ ದಕ್ಷಿಣದಲ್ಲಿ ಇರುವ ತಿಂತ್ರಿಣೀ ವೃಕ್ಷದ ಎಳಿಯಲ್ಲಿರುವ ಹುತ್ತದ ಹತ್ತಿರ ನೆಲೆಸಲು ಮನಸ್ಸು ಮಾಡಿದನು ಎಂಬುವುದಾಗಿ ತಿಳಿಸದೆ"

**ಕಂದಾಡೈಕೇಶವನ್**

## ಭೃಗು ಪುಲೋಮೆ

ಭೃಗು ಮಹರ್ಷಿಯ ಹೆಂಡತಿಯು ಪುಲೋಮೆ ಆಕೆ ಈತನಿಗೆ ಬಹು ಪ್ರಿಯಳಾಗಿದ್ದಳು ಪುಲೋಮೆ ಗರ್ಭವತಿಯಾಗಿದ್ದಾಗ ಒಂದು ದಿನ ಮಹರ್ಷಿ ಸ್ನಾನಕ್ಕೆ ನದಿಗೆ ಹೋಗಿದ್ದಾಗ ಹಿಂದೆ ಪುಲೋಮೆಯನ್ನು ಪ್ರೀತಿಸಿದ್ದ ಪುಲೋಮಯೆಂಬ ರಾಕ್ಷಸನು ಆಕೆಯಲ್ಲಿ ಕಾಮಾಭಿಭೂತನಾಗಿ ಅಪಹ ರಿಸಿಕೊಂಡು ಹೊರಟನು ಪುಲೋಮೆಯ ಗರ್ಭ ದಲ್ಲಿ ಬೆಳೆಯುತಲ್ಲಿದ್ದ ಶಿಶುವು ರಾಕ್ಷಸನ ಕೃತ್ಯಕ್ಕೆ ಬಹಳ ಕುಪಿತನಾಗಿ ಗರ್ಭದಿಂದ ಜಾರಿ ಹೊರ ಬಂದನು ಇವನೇ ಚ್ಯವನ ಮಹರ್ಷಿ ಶಿಶು ವಿನ ಕಣ್ಣುಗಳಿಂದ ಬಂದ ಕೋಪಾಗ್ನಿಗೆ ರಾಕ್ಷ ಸನು ಬಲಿಯಾದನು ಸ್ನಾನಾನಾಂತರ ಬಂದ ಭೃಗು ಮಹರ್ಷಿಯು ನಡೆದ ಘಟನೆಯನ್ನು ಕೇಳಿ, ಪುಲೋಮೆಯನ್ನು ರಾಕ್ಷಸನಿಗೆ ತೋರಿಸಿದ ವರು ಯಾರು ಎಂಬುವುದಾಗಿ ಪ್ರಶ್ನಿಸಲು ಅಗ್ನಿ ದೇವನು ತನ್ನನ್ನು ರಾಕ್ಷಸನಿಗೆ ತೋರಿಸಿದನೆಂಬ ವಿಷಯವನ್ನು ಪುಲೋಮೆಯಿಂದ ತಿಳಿದ ಭೃಗು ಅಗ್ನಿಗೆ ಸರ್ವ ಭಕ್ಷಕನಾಗೆಂದು" ಶಾಪಕೊಟ್ಟನು ಪುಲೋಮೆಯಲ್ಲಿ ವಜ್ರಶೀರ್ಷ ಶುಚಿ ಔರ್ವ ಶುಕ್ರ ವರೇಣ್ಣ ಸವಣರೆಂಬ ಪುತ್ರರು ಹುಟ್ಟಿ ದರು

ಭೃಗುವಂಶದ ವರ್ಣನೆಯಲ್ಲಿ ಚ್ಯವನರ ಪುತ್ರನೇ ಪ್ರಮತಿ ಪ್ರಮತಿಗೆ ಘೃತಾಚಿಯಲ್ಲಿ ರುರುವಿನ ಜನನ ರುರುವಿನ ಪುತ್ರ ವೇದ ಪಾರಂ ಗತನಾದ ಶುನಕ ಚ್ಯವನ ಮುನಿಯ ಪತ್ನಿ ಖ್ಯಾತಿ ಈಕೆಯ ಗರ್ಭದಲ್ಲೇ ಲಕ್ಷ್ಮಿ ಅವತರಿ ಸಿದ್ದು ಅದಕ್ಕಾಗಿಯೇ ಲಕ್ಷ್ಮಿಗೆ ಭಾರ್ಗವಿಯೆಂಬು ವುದಾಗಿ ಅನ್ವರ್ಥನಾಮ ಬಂದಿದೆ

## ಭೃಗು ಯವನಾಶ್ವ

ಇಕ್ಷ್ವಾಕು ವಂಶದಲ್ಲಿ ಜನಿಸಿದ ಯವನಾಶ್ವ ರಾಜನು ನೂರು ಅಶ್ವಮೇಧ ಯಾಗಗಳನ್ನು ಮಾಡಿ ವೃದ್ಧ ಪುರುಷನಾಗಿದ್ದರೂ ಆತನಿಗೆ ಮಕ್ಕ ಳಾಗಿರಲಿಲ್ಲ ಯವನಾಶ್ವನು ಭೃಗು ಮಹರ್ಷಿಯ ಆಶ್ರಮಕ್ಕೆ ಬಂದು ಪುತ್ರಾಪೇಕ್ಷೆಯಿಂದ ಅವನನ್ನು ಆಶ್ರಯಿಸಿದನು ಭೃಗುವು ಪುತ್ರಕಾಮೇಷ್ಠಿ ಯಾಗ ವನ್ನು ನೆರವೇರಿಸಿ ಮಂತ್ರ ಪೂರಿತವಾದ ಜಲವನ್ನು ಕಲಶದಲ್ಲಿ ಸಂಗ್ರಹಿಸಿ ಅದನ್ನು ರಕ್ಷಿಸಲು ಋತ್ವಿ ಕ್‌ಗಳಿಗೆ ನೇಮಿಸಿ ತಾನು ಆಶ್ರಮದಲ್ಲಿ ವಿಶ್ರಾಂತಿ ಯನ್ನು ಹೊಂದುತ್ತಿದ್ದನು ಆಶ್ರಮದಲ್ಲಿದ್ದ ಯವ ನಾಶ್ವನು ರಾತ್ರಿಯಲ್ಲಿ ಬಾಯಾರಿಕೆಯಿಂದ ಕಳಸದ ಲ್ಲಿದ್ದ ಮಂತ್ರೋದಕವನ್ನು ಸೇವಿಸಿದನು ಮಾರನೆ ಯದಿನ ಈ ವಿಷಯವನ್ನು ತಿಳಿದ ಮಹರ್ಷಿ ಭೃಗುವು ಯವನಾಶ್ವನ ಪತ್ನಿಯು ಸೇವಿಸಬೇಕಾದ ಮಂತ್ರೋದಕವನ್ನು ಯವನಾಶ್ವನು ಕುಡಿದಿದ್ದರಿಂದ ಯವನಾಶ್ವನು ಗಂಡು ಮಗುವಿಗೆ ಜನ್ಮಕೊಡಬೇ ಕಾದ ದೈವನಿಯಮವನ್ನು ಆತನಿಗೆ ತಿಳಿಸಿದನು ಯವನಾಶ್ವನ ವಾಮಭಾಗದಿಂದ ಮಾಂಧಾತನು ಜನಿಸಿದನು

ಭೃಗು ಮಹರ್ಷಿಯು ಕೈಲಾಸ ಪರ್ವತದಲ್ಲಿ ತಪೋನಿರತನಾಗಿ ತ್ರಿಕಾಲಜ್ಞಾನಿಯಾಗಿ ಲೋಕಹಿತ ಕ್ಕಾಗಿ ತಪಸ್ಸನ್ನು ಮಾಡುತ್ತಿದ್ದನು ಕಾರ್ತವೀರ್ಯಾ ರ್ಜುನ ಜೊತೆಯಲ್ಲಿ ಜಮದಗ್ನಿ ಯುದ್ಧ ಮಾಡಿ ದಾಗ ಮರಣಹೊಂದಲು ಪತಿವ್ರತೆಯಾದ ರೇಣು ಕಾದೇವಿ ಸಹಗಮನವನ್ನು ಮಾಡಲು ಉದ್ಯುಕ್ತ ಳಾಗಿರಲು ಅಲ್ಲಿಗೆ ಬಂದ ಭೃಗು ಮಹರ್ಷಿ ಆಕೆ ಯನ್ನು ಸಂತೈಸಿ ತನ್ನ ತಪೋಬಲದಿಂದ ಜಮ ದಗ್ನಿಯನ್ನು ಬದುಕಿಸಿದನು ಮುಂದೆ ಆಕೆಯ ಗರ್ಭದಲ್ಲಿ ಸ್ವಯಂ ವಿಷ್ಣುವೇ ಅವತಾರಮಾಡಿ ಭೂಭಾರ ಕಮ್ಮಿ ಮಾಡುವೆನೆಂಬುವುದಾಗಿ ಭವಿ ಷ್ಯವನ್ನು ನುಡಿದನು ಮುಂದೆ ರೇವತಿಯ ಗರ್ಭ ದಲ್ಲಿ ಪರಶುರಾಮನು ಉದಯಿಸಿ ಕೆಟ್ಟ ರಾಜ ರನ್ನು ಸಂಹರಿಸಿ ತನ್ನ ವಂಶದ ಭೃಗು ಮಹರ್ಷಿ ಯನ್ನು ಸಂದರ್ಶಿಸಿದಾಗ ಭೃಗುವು ಪರಶುರಾ ಮನಿಗೆ ಲೋಕಹಿತಕ್ಕಾಗಿ ಕೈಲಾಸಕೆ ತೆರಳಿ ಅಲ್ಲಿ ಪರಶಿವನನ್ನು ಕುರಿತು ತಪಸ್ಸು ಮಾಡು ಎಂಬುವು ದಾಗಿ ತಿಳಿಸಲು ಪರಶುರಾಮನು ಅಂತೆಯೇ ತಪ ಸ್ಸನ್ನು ಆಚರಿಸಿದಾಗ ಶಿವನ ಕೃಪೆಯಿಂದ ಭಾರ್ಗ ವಾಸ್ತ್ರವನ್ನು ಪಡೆದು ಭೃಗುವು ಉಪದೇಶದಂತೆ ನಡೆದನು

ಮಹಾಭಾರತದ ಶಾಂತಿ ಪರ್ವದ ಮೋಕ್ಷ ಧರ್ಮ ಪರ್ವದಲ್ಲಿ ಭರದ್ವಾಜ ಭೃಗು ಮಹ ರ್ಷಿಗಳ ಸಂವಾದದಲ್ಲಿ ಪ್ರಪಂಚದ ಸೃಷ್ಟಿ ವಿಚಾ ರವನ್ನು ಹೇಳುವಾಗ ಪೂರ್ವದಲ್ಲಿ ಪ್ರಸಿದ್ಧನಾದ ಮಾನಸನೆಂಬ ದೇವರಿದ್ದನು ಅವನು ಅನಂತನು ಅವ್ಯಕ್ತನು ಅವನಿಂದ ಎಲ್ಲ ಪ್ರಾಣಿಗಳ ಸೃಷ್ಟಿ

ಯಾಯಿತು ಮಾನಸದೇವನ ಮುಂತೆ ಸಮಷ್ಟಿ ಬುದ್ಧಿಯನ್ನು ಸೃಷ್ಟಿಸಿದನು ತರುವಾಯ ಆಕಾಶ ಆಕಾಶದಿಂದ ನೀರು ನೀರಿಂದ ಅಗ್ನಿ ವಾಯು ವೃದ್ಧೀ ಕಮಲ ಕಮಲದಿಂದ ಬ್ರಹ್ಮ ಬ್ರಹ್ಮನು ಸರ್ವಪ್ರಾಣಿಗಳನ್ನು ಸೃಷ್ಟಿಸಿದನು ಎಂಬುವುದಾಗಿ ತಿಳಿಸುತ್ತಾನೆ

ಸೃಷ್ಟಿಯ ಸೊಬಗನ್ನು ವರ್ಣಿಸುವಾಗ ಭೃಗು ಮಹರ್ಷಿ-

ಪವನಶ್ಚೈವ ನಿಶ್ವಾಸ
ತೇಜೋಽಗ್ನಿ ರ್ನಿಮಗ್ನಾ ಗಿರಿ
ಅಗ್ನೀಷೋಮೌತು ಚಂದ್ರಾರ್ಕಾ
ನಯನೇ ತಸ್ಯ ವಿಶ್ರುತೇ |

ಬ್ರಹ್ಮನಿಗೆ ಗಾಳಿ ನಿಶ್ವಾಸವು ಅಗ್ನಿ ತೇಜಸ್ಸು ರೂಪದಲ್ಲಿದ್ದಾನೆ ನದಿಗಳು ರಕ್ತನಾಳಗಳು ಸೂರ್ಯಚಂದ್ರರೇ ಎರಡು ನೇತ್ರಗಳು ಅಗ್ನಿ ಗಾಳಿ ನೀರು ಪೃಥ್ವಿಗಳ ವರ್ಣರೂಪಗಳು ಆಕಾಶದಿಂದಲೇ ಪ್ರಕಟನೆ ಎಂಬುವ ನೂತನ ಸಿದ್ಧಾಂತವನ್ನು ಭೃಗುವು ತಿಳಿಸಿದನು ಪರಮಾತ್ಮನು ಅಣುವಿನಲ್ಲಿ ಅಣುವು ಬೃಹತ್‌ನಲ್ಲಿ ಮಹತ್ ಎಂಬ ಸಿದ್ಧಾಂತವನ್ನು ಹೇಳುವಾಗ ಭೃಗು ಮಹರ್ಷಿ

"ಯಾದಾತು ದಿವ್ಯಂ ತದ್ರೂಪಂ
ಹ್ರಸತೇ ವರ್ಧತೇ ಪುನ
ಕೋಽನ್ಯಸ್ತದ್ವೇದಿತುಂ ಶಕ್ತೋ
ಯೋಽಪಿ ಸ್ಯಾತ್ತ ದ್ವಿಧೋಽಪರ

ಅವನು ಅಣುವಾಗಿ ಬೃಹದ್ರೂಪನಾಗಿ ಪರಿವರ್ತನೆ ಯಾಗಬಲ್ಲ ಅವನ ಪ್ರಭಾವವನ್ನು ಯಾರೂ ಅರಿಯಲು ಶಕ್ಯವಿಲ್ಲ ಪ್ರಾಣಿಗಳ ಶರೀರವು ಪಂಚಭೂತಗಳ ಸಂಘಾತವು ಎಂಬುವ ತತ್ವವನ್ನೂ ಭೃಗು ಮಹರ್ಷಿ ವಿವರಿಸುವಾಗ

"ಪೃಥಿವೀ ಚಾತ್ರ ಸಂಘಾತ
ಶರೀರಂ ಪಾಂಚಭೌತಿಕಂ

ಎಂಬುವುದಾಗಿ ಭರದ್ವಾಜರಿಗೆ ಉಪದೇಶಿಸಿದ್ದಾರೆ ಪಶುಪಕ್ಷಿಗಳಂತೆ ವೃಕ್ಷಗಳಿಗೂ ಜೀವವಿದೆ ಅವುಗಳಿಗೂ ಪಂಚೇಂದ್ರಿಯಗಳ ಸಂಜ್ಞೆಗಳಿವೆ ಅವುಗಳೂ ಶೀತೋಷ್ಣ ಸುಖ ದುಃಖಗಳನ್ನು ಅನುಭವಿಸುತ್ತವೆ ಎಂಬುವ ನೂತನ ವಿಜ್ಞಾನ ಸೂತ್ರವನ್ನು ಮೊತ್ತ ಮೊದಲನೆಯದಾಗಿ ಭೃಗು ನೀಡುವಾಗ

ಸುಖ ದುಃಖ ಯೋಶ್ಚ ಗ್ರಹಣಾ
ಚ್ಛಿನ್ನಸ್ಯ ಚ ವಿರೋಹಣಾತ್

ಪಂಚಭೂತಗಳ ಪ್ರಕ್ರಿಯೆಗಳೇ ಸಮಸ್ತ ಸ್ಥಾವರ ಜಂಗಮ ಪ್ರಾಣಿಗಳನ್ನು ಕರ್ಮಗಳಲ್ಲಿ ತೊಡಗಿಸುತ್ತವೆ ಎಂಬುವುದಾಗಿ ಭೃಗು ಹೇಳುವಾಗ

"ಜಂಗಮಾನಾಂ ಚ ಸರ್ವೇಷಾಂ
ಶರೀರೇ ಪಂಚ ಧಾರವ |
ಪ್ರತ್ಯೇಕಶ ಪ್ರಭಿದ್ಯನ್ತೇ
ತೈ ಶರೀರಂ ವಿಚೇಷ್ಟತೇ"

ಎಂಬುವುದಾಗಿ ಸಾರಿದ್ದಾರೆ ಗಂಧ ಸ್ಪರ್ಶ ರಸ ರೂಪ ಶಬ್ದಗಳ ವಿವಿಧ ವಿಷಯಗಳನ್ನು ವಿವರವಾಗಿ ತಿಳಿಸಿರುವ ಭೃಗುವಿನ ಜ್ಞಾನ ಅಪಾರ

ಆತ್ಮವು ತಲೆಯಲ್ಲಿಯೂ ಅಗ್ನಿಯಲ್ಲೂ ಆಶ್ರಯಿಸಿ ಶರೀರವನ್ನು ಕ್ರಿಯಾಶೀಲವನ್ನಾಗಿ ಮಾಡುತ್ತದೆ ಎಂಬುವುದನ್ನು ತಿಳಿಸುವಾಗ

ಶ್ರೀಯೋ ಮೂರ್ಧಾನ ಮಾತ್ಮಾ ತು
ಶರೀರಂ ಪರಿಪಾಲಯನ್
ಪ್ರಾಣೋ ಮೂರ್ಧನಿ ಚಾಗ್ನೌ ಚ
ವರ್ತಮಾನೋ ವಿಚೇಷ್ಟತೇ

ಬ್ರಹ್ಮಾಂಡ ಪುರಾಣದಲ್ಲಿ ಭೃಗು ನಾರದರ ಸಂವಾದದಲ್ಲಿ ಶ್ರೀ ವೆಂಕಟಾಚಲ ಮಹಾತ್ಮೆಯನ್ನು ವರ್ಣಿಸುವಾಗ ಉಲ್ಲೇಖ-

ಕದಾಚಿತ್ ಪರ್ಯಟನ್ ಭೂಮಿಂ
ನಾರದೋ ಮುನಿಸತ್ತಮ
ಆಜಗಾಮ ಆಶ್ರಮಂ ಪುಣ್ಯಂ
ಭೃಗೋ ಮುದಿತಮಾನಸ

ಎಂಬುವುದಾಗಿ ಹೇಳುತ್ತಾ ಶ್ರೀ ವೆಂಕಟಾಚಲ ಮಹಾತ್ಮ್ಯೆಯನ್ನು ಹೇಳುವಾಗ-

ಶ್ರೀ ವೆಂಕಟಗಿರಿ ನ್ನಾಮ
ಕ್ಷೇತ್ರಂ ಪುಣ್ಯಂ ಮಹೀತಲೇ
ಸರ್ವ ಪಾಪ ಪ್ರಶಮನಂ
ಸರ್ವ ಪುಣ್ಯ ವಿವರ್ಧನಂ |
ಆರಾಧ್ಯ ಸರ್ವ ದೇವಾನಾಂ
ಮಾಧವೋ ಭಕ್ತವತ್ಸಲ
ವಿಹಾಯ ಸ್ವಂ ಪರಂಧಾಮ
ರಮತೇ ರಮಯಾ ಸಹ ||
ಅಂಜನಾದ್ರಿ ವೃಷಾದ್ರಿಶ್ಚ
ಶೇಷಾದ್ರಿ ಗರುಡಾಚಲ
ತೀರ್ಥಾದ್ರಿ ಶ್ರೀನಿವಾಸಾದ್ರಿ
ಚಿಂತಾಮಣಿಗಿರಿಸ್ತಥಾ |
ವೃಷಭಾದ್ರಿ ವರಾಹಾದ್ರಿ
ಜ್ಞಾನಾದ್ರಿ ಕನಕಾಚಲ
ಆನಂದಾದ್ರಿಶ್ಚ ನೀಲಾದ್ರಿ
ಸುಮೇರು ಶಿಖರಾಚಲ
ವೈಕುಂಠಾದ್ರಿ ಪುಷ್ಕರಾದ್ರಿ
ಇತಿ ನಾಮಾನಿ ವಿಂಷತಿ ||

ಎಂಬುವುದಾಗಿ ವೆಂಕಟಗಿರಿಗೆ ಇರುವ ಹಲವು ನಾಮಗಳನ್ನು ನಾರದರು ಭೃಗುವಿಗೆ ತಿಳಿಸಿದ್ದಾರೆ ಮತ್ತೆ ತಿರುಪತಿಗೆ ಸಮಾನವಾದ ಬೆಟ್ಟ ಶ್ರೀ ವೆಂಕಟೇಶನಿಗೆ ಸಮಾನವಾದ ದೈವ ಮತ್ತೊಂದಿಲ್ಲ ಎಂಬುವುದಾಗಿ ಹೇಳುವಾಗ ನಾರದರು ಭೃಗುವಿಗೆ

"ವೆಂಕಟಾದ್ರಿ ಸಮಂ ಸ್ಥಾನಂ
ಬ್ರಹ್ಮಾಂಡೇ ನಾಸ್ತಿ ಕಿಂಚನ |
ವೆಂಕಟೇಶ ಸಮೋ ದೇವೋ
ನಭೂತೋ ನ ಭವಿಷ್ಯತಿ ||
ತಸ್ಮಿನ್ ಬಹೂನಿ ತೀರ್ಥಾನಿ
ಸುರಸಿದ್ಧ ನಿಷೇವಿತೇ |
ರಮ್ಯಾಣಿ ಸಂತಿ ಶತಶ
ಸರ್ವಾಘೌಘ ಹರಾಣ್ಯಪಿ ||

ಎಂದು ಹೇಳುತ್ತಾರೆ

ಕಾತ್ಯಾಯನ ಮಹರ್ಷಿ ತನ್ನ ಧರ್ಮಸೂತ್ರಗಳಲ್ಲಿ ಭೃಗು ಮಹರ್ಷಿಯ ಅನೇಕ ಧರ್ಮಸೂತ್ರಗಳನ್ನು ಉದಹರಿಸಿದ್ದಾನೆ ಜಾತಿ ವಿದ್ಯೆಗಳಲ್ಲಿ ಶ್ರೇಷ್ಠನಾಗಿದ್ದರೂ ಅವನು ಆತತಾಯಿಯಾಗಿದ್ದರೆ ಅವನನ್ನು ಕೊಲ್ಲುವುದರಿಂದ ಬ್ರಹ್ಮಹತ್ಯಾ ದೋಷವಿಲ್ಲವೆಂದು ಭೃಗುವಿನಮತ ಭೃಗು ಮಹರ್ಷಿ ತಪಸ್ಸು ಮಾಡುತ್ತಿದ್ದ ಸರೋವರ ನರ್ಮದಾ
ನದಿಯು ಸಮುದ್ರಕ್ಕೆ ಸೇರುವ ಸ್ಥಳ ಈಗ ಬ್ರೋಚ್ ಎಂಬುವುದಾಗಿ ಪ್ರಸಿದ್ಧವಾಗಿದೆ ✻



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ)ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ ತಿ ದೇ ಪ್ರಕಟಣೆಗಳಾದ ಪುಸ್ತಕಗಳು ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭ ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ ಕ್ಯಾಂಟೀನ್

* ಯಾತ್ರಿಕರ ವಸ್ತುಗಳು ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ

* ಪಂಡಾಗಳು ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ**

ಗಮನಿಕೆ ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೭ ೩೦ ಗಂಟೆಯವರೆಗೆ ಕೆಲಸಮಾಡುತ್ತದೆ ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦ ೩೦ ರಿಂದ ೧ ೦೦ ಗಂಟೆಯವರೆಗೆ ಕೆಲಸಮಾಡುತ್ತದೆ

# ದಾಸೋಹ

ದಾಸೋಹ ಈ ಪದದ ಅರ್ಥವನ್ನು ಕಿಟಲ್ ಅರ್ಥಕೋಶವು ದಾಸ ಅಹಂ -ನಾನೊಬ್ಬ ಸೇವಕ ದೇವರಲ್ಲಿ ಭಕ್ತಿ ಭಾವನೆಯುಳ್ಳ ಸೇವಕ ಇತ್ಯಾದಿಯಾಗಿ ನೀಡಿದೆ ದಾಸೋಹದಿಂದಲೇ ದಾಸೋಹತನ ದಾಸೋಹಿ ದಾಸ್ಯ ಇತ್ಯಾದಿ ಪದಗಳು ಭಾವಾರ್ಥಗಳನ್ನು ವಿಸ್ತೃತಗೊಳಿಸಿಕೊಂಡು ದಾಸೋಹತತ್ತ್ವವನ್ನು ಬಳಸಿಕೊಂಡು ಬಳೆಯುತ್ತವೆ ದಾಸೋಹತನವೆಂದರೆ ದಾಸೋಹ ಭಾವನ ದಾಸೋಹಿ ಎಂದರೆ ಭಕ್ತ ದೇವರ ಸೇವಕ ಎಂದೂ ಅರ್ಥ ಡಾ|| ಶಿವರಾಮ ಕಾರಂತರು ಸಂಪಾದಿಸಿರುವ ಸಿರಿಗನ್ನಡ ಅರ್ಥವಿಕಾಸವು ದಾಸ್ ಎಂದರೆ ಕೊಡು ಎಂಬ ಅರ್ಥವನ್ನು ನೀಡಿ ದಾಸೋಹ ತತ್ತ್ವದ ಅರ್ಥವಿಕಾಸದ ಧ್ವನಿಯ ಒಳ ಇಂಗಿತವನ್ನು ಸ್ಪಷ್ಟಪಡಿಸುವಂತಿದೆ ಏಕೆಂದರೆ ತನ್ನದೆಂದು ಬಗೆದ ತನು ಮನ ಧನಗಳನ್ನೆಲ್ಲ ಗುರುಲಿಂಗ ಜಂಗಮರಿಗೆ ದಾನವಾಗಿಸುವ ಸ್ತರಕ್ಕೆ ದಾಸೋಹ ಎಂಬ ಅರ್ಥಗಾಂಭೀರ್ಯ ಬರುವುದನ್ನು ನಾವಿಲ್ಲಿ ಗಮನದಲ್ಲಿಟ್ಟರೆ ಮುಂದಿನ ವಿಚಾರಗಳೆಲ್ಲ ಸ್ಪಷ್ಟವಾಗುತ್ತವೆ ಇದನ್ನು ಮುಂದೆ ವಿಸ್ತರಿಸೋಣ ಇದೇ ಕೋಶದಲ್ಲಿ ದಾಸೋಹ (ದಾಸೋಹಂ) ಎಂದರೆ ತಾನು ದಾಸನೆಂಬ ಭಾವನೆ ಸೇವಾವೃತ್ತಿ ಭಕ್ತಿ ಇತ್ಯಾದಿ ಅರ್ಥಗಳು ಇವೆ ದಾಸೋಗ ಎಂದರೆ ಅನ್ನಛತ್ರ ಎಂಬ ಅರ್ಥವನ್ನೂ ನೀಡಲಾಗಿದೆ ಪಂಡಿತ ಜೆ ಎ ಕವಲಿ ಅವರು ಸಂಗ್ರಹಿಸಿದ ಸಚಿತ್ರ ಕನ್ನಡ - ಕನ್ನಡ ಕಸ್ತೂರಿ ಕೋಶದಲ್ಲಿ ದಾಸ ಪದಕ್ಕೆ ಸೇವಕ ಆಳು ಗುಲಾಮ ಭಕ್ತ ಬೆಸ್ತ ಜಾಲಗಾರ ಎಂದೂ ಅನುದಾನ ಪದಕ್ಕೆ ಆಳಿನಾಳು ಸೇವಕರ ಸೇವಕ ಅತ್ಯಂತ ವಿನೀತ ಅನನ್ಯ ಭಕ್ತ ಭಕ್ತರ ಭಕ್ತ ಎಂದೂ ಅನುದಾಸತ್ವ ಎಂಬುದಕ್ಕೆ ಸೇವೆ, ಭಕ್ತಿ, ಊಳಿಗ ನಾನು ದೇವರ ಭಕ್ತನೆಂಬ ಭಾವನೆ - ಈ ಭಾವನೆಯಿಂದ ನಡೆಸುವ ಅನ್ನಛತ್ರ ಭಿಕ್ಷಾವೃತ್ತಿ ಸೇವಾವೃತ್ತಿ ಭಕ್ತಿ ಇತ್ಯಾದಿ ಅರ್ಥಗಳಿವೆ ಕನ್ನಡ ಸಾಹಿತ್ಯ ಪರಿಷತ್ತಿನ ಸಂಕ್ಷಿಪ್ತ ಕನ್ನಡ ನಿಘಂಟು ದಾಸ ಎಂಬುವುದಕ್ಕೆ ಆಳು ಸೇವಕ ದಾಸಪಂಥದವನು ಹರಿಭಕ್ತ ಜಲಗಾರ ಬೆಸ್ತ ಎಂದೂ ಅನುದಾನ ಎಂಬುದಕ್ಕೆ ಸೇವಕರ ಸೇವಕ ಎಂದೂ ದಾಸಕೂಟ ಎಂಬುದಕ್ಕೆ ಹರಿದಾಸ ಪರಂಪರೆ ಎಂದೂ ಅರ್ಥಗಳನ್ನು ನೀಡಿದೆ ದಾಸೋಹ ಎಂಬುದಕ್ಕೆ ಸೇವಾವೃತ್ತಿ ಕಿಂಕರತೆ ಭಕ್ತ, ಶಿವಭಕ್ತರಿಗೆ ಮಾಡುವ ಆರೋಗಣೆ ಎಂಬ ಅರ್ಥಗಳಿವೆ ದಾಸ್ಯ ಎಂಬುದಕ್ಕೆ ಊಳಿಗ ಸೇವಾವೃತ್ತಿ ಅಧೀನತೆ ಎಂಬುದಾಗಿ ಅರ್ಥಗಳಿವೆ ಹೀಗೆ ದಾಸೋಹಂ ಪದದ ಅರ್ಥವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕಾದರೆ ಅಭ್ಯಾಸಿಗರು ದಾಸ ದಾಸ್ಯ ದಾಸೋಹ ದಾಸೋಹಿ ಇತ್ಯಾದಿ ಪದಗಳ ಸಂಪೂರ್ಣವಾದ ಅರ್ಥಗೌರವವನ್ನು ಅರಿತಿರಬೇಕಾಗುತ್ತದೆ

ನಿಘಂಟುಗಳಲ್ಲಿ ಸಂಗ್ರಹಿತವಾದ ಅರ್ಥಗಳನ್ನು ಗಮನಿಸಿದರೆ ದಾನಪ್ರವೃತ್ತಿಯಲ್ಲಿ ಅಡಕವಾಗಿರುವ ಸೇವಾಪ್ರವೃತ್ತಿಯಿಂದಲೇ ಉಳಿದೆಲ್ಲ ಅರ್ಥವ್ಯಾಪ್ತಿಗಳ ಶಬ್ದಗಳು ಆಯಾ ಕಾಲದ ಪರಿಸರದಲ್ಲಿ



ಮೂಡಿಬಂದುವು ಎನ್ನಬೇಕಾಗುತ್ತದೆ ಭಕ್ತಿ ಪಾರಮ್ಯವು ತೀವ್ರ ಪ್ರಭಾವವನ್ನು ಕಂಡಾಗ ದಾಸ ಮತ್ತು ದಾಸೋಹ ಪದಗಳಿಗೆ ವಿಶಿಷ್ಟವಾದ ಸ್ಥಾನಮಾನಗಳು ದೊರೆತವೆಂಬುದನ್ನು ಸದಾ ನೆನಪಿನಲ್ಲಿಡಬೇಕಾಗುತ್ತದೆ ಭಕ್ತಿ ಜ್ಞಾನ ವೈರಾಗ್ಯಗಳಿಂದ ಪರಮಾತ್ಮಸ್ವರೂಪವು ಹೊರಹೊಮ್ಮಿದಾಗ ಭಕ್ತಿಪಾರಮ್ಯದಲ್ಲಿ ಆನಂದಾನುಭೂತಿ ಬೇಗ ದೊರೆಯುತ್ತದೆ ಭಕ್ತಿಯ ಸೊಗಸು ಒಡೆಯನ ಔದಾರ್ಯದಿಂದ ಕೂಡಿರುವುದರಿಂದ ಅಲ್ಲಿಯ ವಿನಯಪರಸಂಸ್ಕೃತಿಯು ಪರಮಾತ್ಮನನ್ನು ಬೇಗನೇ ಒಲಿಸಿಬಿಡುತ್ತದೆ ಮೃದುಗೊಳಿಸಿದ ಭಾವದಲ್ಲಿ ಪರಮಾತ್ಮ ಸಿಕ್ಕು ಬಿಟ್ಟರೆ ಸಾಕು ಅವನು ಕೊಸರಿಕೊಂಡು ಅಲ್ಲಿಂದ ಹೋಗಲಾರ ಆದ್ದರಿಂದ ಭಕ್ತರು ಪರಮಾತ್ಮನೊಡನೆ ಬಹು ಸದರಮಾಡುತ್ತಾರೆ ಅದೆಂತಹ ಅಪರೂಪ ವಾದ ಸದರವೆಂದರೆ ನಿರಪೇಕ್ಷವಾದ ಮುಕ್ತ ಒಡನಾಟವಾಗಿಬಿಡುತ್ತದೆ ಹೀಗಾಗಿ ದಾಸೋಹ ಪದವು ಅಧ್ಯಾತ್ಮಿಕ ಪರಿಭಾಷೆಯ ಭಾವವಿಸ್ತೃತಿಯನ್ನೂ ಆನಂದಪ್ರವೃತ್ತಿಯ ಮೂಲವನ್ನೂ ಮುಟ್ಟಿಸಿ ಪಾರಮ್ಯವನ್ನು ದೊರಕಿಸಿಕೊಡುವ ಶಕ್ತಿಯನ್ನು ಪಡೆಯುತ್ತದೆ ಆದ್ದರಿಂದ ದಾಸ ಮತ್ತು ದಾಸೋಹಗಳಿಗೆ ಆಳು ಭಿಕ್ಷಾನ್ನ ಇತ್ಯಾದಿ ಅರ್ಥಗಳು ಬರುವಂತೆ ಲಘುವಾಗಿ ಅವುಗಳನ್ನು ಬಳಸಕೂಡದು ಸ್ವಯಂಶಕ್ತವಾದ ಈ ಪದವನ್ನು ಭಿಕ್ಷಾನ್ನ ಬೇಡುವ ಕಾಯಕದವರೆಂದು ಗೇಲಿಮಾಡುವ ಅರ್ಥಧ್ವನಿಯು ಬರುವಂತೆಯೂ ಈ ಪದಗಳನ್ನು ಬಳಸಬಾರದು ಹಾಗೆ ಬಳಸಿದರೆ ಭಕ್ತಿ ಸಾಹಿತ್ಯವೇ ಶಕ್ತಿಯಾಗಿರುವ ಜನಾಂಗಗಳಿಗೆ ಪ್ರದೇಶಗಳಿಗೆ ಅಪಹಾಸ್ಯ ಮಾಡಿದ ಕೇಡು ಸಂಭವಿಸುವುದು

ದಾಸೋಹಂ ಎಂಬುದು ಸರ್ವಸಮರ್ಪಣಾ ಭಾವದಿಂದ ಕಾರ್ಯ ಮಾಡುವುದೆಂದು ಅರ್ಥ ಮಾಡಿದರೆ ಸಮಂಜಸವಾಗುತ್ತದೆ ಈ ಮಾತಿಗೆ ಭಗವದ್ಗೀತೆಯಲ್ಲಿ ಸಾಕಷ್ಟು ಇಂಬುದೊರೆತಿದೆ ಏಕೆಂದರೆ ಅಲ್ಲಿ ಭಕ್ತಿಜ್ಞಾನಗಳ ಕುರಿತಾಗಿ ಸ್ಪಷ್ಟ ಚಿತ್ರಣಗಳಿವೆ ಅನೇಕ ಶಂಕೆಗಳಿಗೆ ಪರಿಹಾರವಿದೆ ನಿಚ್ಚಳ ಬದುಕಿಗೆ ಇಂಬಿದ ಅಲ್ಲಿಯ ಇಂಗಿತವನ್ನು ಹೀಗೆ ಸಂಗ್ರಹಿಸಬಹುದು

ಕರ್ಮವನ್ನು ಮಾಡದಿರುವುದೇ ನೈಷ್ಕರ್ಮ್ಯ (ಜ್ಞಾನಯೋಗ) ವಲ್ಲ ಕರ್ಮವನ್ನು ತೊರೆದ ಮಾತ್ರಕ್ಕೇ ಸಿದ್ಧಿ ಸಿಕ್ಕುವುದಿಲ್ಲ (ಅಧ್ಯಾಯ ೩-೪)

ಸಂನ್ಯಾಸ (= ಕರ್ಮವನ್ನು ಬಿಟ್ಟು ಜ್ಞಾಯೋಗ) ಮತ್ತು ಕರ್ಮಯೋಗ - ಎರಡು ಶ್ರೇಯಸ್ಕರವೇ ಆದರೂ - ಆ ಎರಡರಲ್ಲಿ ವಿಶೇಷವಾದುದು ಕರ್ಮಯೋಗ (ಅಧ್ಯಾಯ ೫-೨ ಕರ್ಮಯೋಗದ ಸಹಾಯವಿಲ್ಲದೆ ಸಂನ್ಯಾ

ಪ್ರೊ ವಸಂತಕುಷ್ಟಗಿ

ವನ್ನು ಪಡೆಯುವುದು ಕಷ್ಟ ಕರ್ಮಯೋಗದಿಂದ ಮುನಿಯು ಬ್ರಹ್ಮನನ್ನು ತಡವಿಲ್ಲದೆ ಪಡೆಯುವನು (೫-೬)

ಕರ್ಮಯೋಗದಿಂದ ಮನಸ್ಸನ್ನೂ ಇಂದ್ರಿಯಗಳನ್ನು ಜಯಿಸಿ ಶುದ್ಧಾತ್ಮನಾದವನು – ಎಲ್ಲರನ್ನೂ ತನ್ನಂತೆ ಭಾವಿಸುತ್ತ – ಕರ್ಮಗಳನ್ನು ಮಾಡಿದರೂ – ಆ ಕರ್ಮದಿಂದ ಅವನೆಂದಿಗೂ ಬದ್ಧನಾಗುವುದಿಲ್ಲ (೫-೭)

ಕರ್ಮವನ್ನು ಬ್ರಹ್ಮಕ್ಕರ್ಪಿಸಿ ಫಲಾಪೇಕ್ಷೆಯಿಲ್ಲದೆ ಯಾವನು ಮಾಡುವನೋ ಅವನಿಗೆ ಪಾಪದ ಲೇಪವಿಲ್ಲ – ತಾವರೆಗೆ ನೀರಿನ ಲೇಪವಿಲ್ಲದಂತೆ (೫-೧೦) ಯೋಗಿಗಳು ತಮ್ಮ ದೇಹ ಮನಸ್ಸು ಬುದ್ಧಿ ಇಂದ್ರಿಯಗಳ ಮುಖಾಂತರ ಕರ್ಮವನ್ನು ಮಾಡುವುದು ಆತ್ಮಶುದ್ಧಿಗಾಗಿಯೇ ಹೊರತು ಮತ್ತಾವ ಲೋಭದಿಂದಲ್ಲ (೫-೧೧)

ಜಿತೇಂದ್ರಿಯನು ಎಲ್ಲ ಕರ್ಮಗಳನ್ನೂ ಮನಸಾರ ತ್ಯಜಿಸಿ – ತಾನೂ ಮಾಡದೆ ಯಾರಿಂದಲೂ ಮಾಡಿಸದೆ ದೇಹದಲ್ಲಿ ಸುಖವಾಗಿರುವನು (೫-೧೩) –

ಇಂತಹ ಮಾತಿನ ಸರಣಿಯಲ್ಲಿ ಸರ್ವಸಮರ್ಪಣೆಯೇ ಸದ್ಗತಿಯನ್ನು ಪಡೆಯುವ ಸಾಧನವೆಂಬುದು ಅಭಿವ್ಯಕ್ತವಾಗಿರುವುದು ಸ್ಪಷ್ಟವಾಗಿದೆ ಅದೇ ರೀತಿ ಜೈನ ಧರ್ಮದಲ್ಲಿಯೂ ಸಮ್ಯಕ್‌ದರ್ಶನ ಸಮ್ಯಕ್‌ಜ್ಞಾನ ಸಮ್ಯಕ್‌ಚಾರಿತ್ರ್ಯ, ಸಮ್ಯಕ್ ತಪಸ್ಸು – ಈ ಆರಾಧನಾ ಚತುರಂಗ ಸಾಧನವು ಲಭ್ಯವಾಗಬೇಕಾದರೆ ದಾಸೋಹ ಪದದ ಒಳನಾಡಿಗಳಲ್ಲಿಯ ಶುಚಿರ್‌ಭೂತವಾದ ಆಚಾರ ವಿಚಾರಗಳ ತಳಹದಿಯ ಮೇಲೆ ಸೇವಾ ಪ್ರವೃತ್ತಿ ಮತ್ತು ತ್ಯಾಗಮನೋವೃತ್ತಿಗಳು ವಿಕಾಸವಾಗಿ ಬೆಳಂಬೆಳಕಾಗಿ ಚಿರಶಾಂತಿಯ ನೆಲೆಯನ್ನು ಸಾಧಿಸಲು ಅಹಿಂಸಾಪರಮೋಧರ್ಮ ಸಾರ್ಥಕವಾದ ಮಾರ್ಗವಾಗಿ ಸಾಕ್ಷ್ಯ ಒದಗಿಸಿದೆ

ಮುಂದೆ ಹನ್ನೆರಡನೆಯ ಶತಮಾನದಲ್ಲಿ ಶಿವಶರಣರ ಆಂದೋಲನದಲ್ಲಿ ದಾಸೋಹ ಪದಕ್ಕೆ ಸ್ಪಷ್ಟವೂ ಅರ್ಥಪೂರ್ಣವೂ ಆದ ನೆಲೆಗಟ್ಟು ಬಂದಿತು ಮಾನವಸೇವಾರೂಪವಾದ ಜಂಗಮ ದಾಸೋಹಕ್ಕಾಗಿ ಕರ್ಮ (ಕಾಯಕ) ಮಾಡುವ ಪ್ರವೃತ್ತಿಯು ವಿಕಾಸವಾಗ ತೊಡಗಿತು ಅವರು ದೇವರಲ್ಲಿ ಭಕ್ತಿಯಿಟ್ಟು ಮಾನವಸೇವೆಯಲ್ಲಿ ದೇವಮಾನವ ಸಮನ್ವಯವನ್ನು ಅತ್ಯಂತ ಅರ್ಥಪೂರ್ಣವಾಗಿ ಬದುಕು ಮಾಡಿದರು ಅವರು ಬದುಕಿದ ಕಾಯಕ ತತ್ವವು ನಿತ್ಯ ಪ್ರಸ್ತುತ ಮತ್ತು ಕಾಯಕ ಭಾಷೆಯು ಸಾರ್ವಕಾಲಿಕ ಧ್ವನಿಪೂರ್ಣ ಎಂದು ಹೇಳಲೇಬೇಕು ಈ ಸಂದರ್ಭದಲ್ಲಿ ಬಸವಣ್ಣನ ಬದುಕನ್ನು ಸಮಗ್ರವಾಗಿ ನೋಡಿದಾಗ ನಮಗಲ್ಲಿ ದಾಸೋಹದ ಚಿತ್ರವು ಸಂಪೂರ್ಣ ಧ್ವನಿತವಾಗುತ್ತದೆ ಆತನ ಬದುಕಿನ ತುಂಬ ಪರೀಕ್ಷೆಗಳು ನಡೆದು ಒರೆಗೆ ಹಚ್ಚಿಹಚ್ಚಿ ಅವನಿಗೆ ಅವನೇ ಅಪರಂಜಿಯಾಗುತ್ತಾನೆ ಶುದ್ಧಾಗ್ನಿಯಾಗುತ್ತಾನೆ ನೆನೆವ ಮನಕ್ಕೆ ಹೊನ್ನು ನೋಡುವ ಕಂಗಳಿಗೆ ಹೆಣ್ಣು ಪೂಜಿಸುವ ಕೈಗೆ ಮಣ್ಣು – ಇವು ಮೂರು ಹೀಗಿರುವಾಗ, ಇವು ಮೂರನ್ನು ತೋರಿ ದೂರವಿರುವ ಪರಮಾತ್ಮನನ್ನು ದೂರವಿರುವಂತೆ ಮಾಡಲೇ ಬಾರದು ಅವನೊಳಗೇ ಬೆರೆತು ಅವನು ನಮ್ಮೊಡನೇ ಇರುವಂತೆ ಮಾಡಬೇಕು ಇದು ದಾಸೋಹಕ್ರಮ ಅದನ್ನು ಬಸವಣ್ಣ ಮೊದಲಾದವರು ಸಾಧಿಸಿ ತೋರಿದರು ಅಂತೆಯೇ ದಾಸೋಹ ಎಂಬುದು ಅಧ್ಯಾತ್ಮಸಾಧನೆಯಲ್ಲಿಯ ಒಂದು ಕ್ರಿಯಾತ್ಮಕ ಪರಿಭಾಷೆಯಾಗಿ ವಿಜೃಂಭಿಸಿದೆ

ದಾಸೋಹದಲ್ಲಿ ಗುರುಲಿಂಗ ಜಂಗಮವೆಂದು ತ್ರಿವಿಧಗಳಿವೆ ಭಗವಂತನು ಭಕ್ತರ ಉದ್ಧಾರಕ್ಕಾಗಿ ಈ ಮೂರು ರೂಪಗಳಲ್ಲಿ ಬರುವನು ತನುಮನಧನಗಳನ್ನು ಕ್ರಮವಾಗಿ ಇವರಿಗೆ ಅರ್ಪಿಸಿ ಭಿನ್ನ ಭಾವವಿಲ್ಲದೆ ನಡೆದುಕೊಳ್ಳಬೇಕು ಕರ್ಮಕ್ಕೆ ಪ್ರಾಧಾನ್ಯ ಕೊಡುವ ಶಾಸ್ತ್ರಗಳನ್ನನುಸರಿಸಿದರೆ ಸ್ವರ್ಗವೇ ಹೊರತು ಮುಕ್ತಿ ದೊರೆಯುವುದಿಲ್ಲ ಚಾಂದ್ರಾಯಣಾದಿ ಎಂಬಂತಹ ವ್ರತಗಳನ್ನು ಮಾಡಿದರೂ ಅಸಿಧಾರಾವ್ರತವನ್ನು ಕೈಕೊಂಡರೂ ಮುಕ್ತಿಯುಂಟಾಗುವುದೆಂದು ಯಾರು ಹೇಳಬಲ್ಲರು? ವೇದಗಳು ವಿವಿಧ ಯಾಗಗಳನ್ನು ವಿಧಿಸಿ ಪ್ರಾಣಿಹಿಂಸೆಯನ್ನು ಮಾಡುತ್ತವೆ ಹೀಗಿರುವಾಗ ಮುಕ್ತಿ ಎಂಬುದು ದೊರೆಯುವುದು ಹೇಗೆ? ಸ್ಮೃತಿಗಳಿಗೆ ಅಗೋಚರನಾಗಿದ್ದಾನೆ ಪರಮಾತ್ಮ ಆದುದರಿಂದ ಆ ಪರಮಾತ್ಮನನ್ನು ಕಾಣಬೇಕಾದರೆ ಗುರುಲಿಂಗ ಜಂಗಮರಲ್ಲಿ ಭಕ್ತಿ ಅವುಗಳ ದಾಸೋಹ – ಇವೇ ಮಾರ್ಗಗಳು ಅನ್ಯಥಾ ಇಲ್ಲ ಆದರೆ ಈ ಭಕ್ತಿ ನಿಶ್ಚಲ

ವಾದ ಅಕೃತ್ರಿಮವಾದ ಆತ್ಮಾರ್ಪಣ ಮಾಡುವ ಭಕ್ತಿಯಾಗಿರಬೇಕು ಏಕೆಂದರೆ ಭಗವಂತ ಒಲಿಯುವುದು ನಿಷ್ಕಪಟಿಗಳಿಗೆ ದೃಢವ್ರತರಿಗೆ ಆದುದರಿಂದ ಭಕ್ತಿಯೆಂಬುದು ಮಾಡಬಾರದು ಕರಗಸದಂತೆ ಹೋಗುತ್ತ ಕೊಯ್ಯುದು ಬರುತ್ತ ಕೊಯ್ಯುದು ಎಂದು ಬಸವಣ್ಣನವರು ಅನುಭವದಿಂದ ಹೇಳಿದ್ದಾರೆ ಹಾಗಾದರೆ ಇದಕ್ಕೆ ಪರಿಹಾರವೇನು? ಹಾಗಾದರೆ ಏನು ಮಾಡಬೇಕು? ಇದಕ್ಕೆ ಮನುಷ್ಯ ಅರ್ಥಾತ್ ಭಕ್ತನು ಸಂಸಾರವನ್ನೇ ಸರ್ವಸ್ವವೆಂದು ತಿಳಿಯಬಾರದು ಅದಕ್ಕಾಗಿ ಅವನು ತನ್ನಿಚ್ಛೆಯನುಡಿದರೆ ಮೆಚ್ಚುವ ಇದಿರಿಚ್ಛೆಯನುಡಿದರೆ ಮೆಚ್ಚದ ಮನಸ್ಸನ್ನು ತನ್ನ ಸ್ವಾಧೀನಕ್ಕೆ ತಂದುಕೊಳ್ಳಬೇಕಾಗುವುದು ನಾನು ಮಾಡುತ್ತೇನೆ ಬೇಕಾದವರು ಬೇಕಾದುದನ್ನು ಬೇಡಲಿ! ಎಲ್ಲವನ್ನೂ ಕೊಡುತ್ತೇನೆ ಎಂಬ ಮನೋಭಾವವನ್ನು ತೊಡೆದು ಹಾಕಬೇಕಾಗುತ್ತದೆ ಹೀಗೆ ಹೇಳಿದಾಕ್ಷಣಕ್ಕೆ ಅದನ್ನು ತೆಗೆದು ಹಾಕಿಬಿಡುವುದು ಸುಲಭವೆಂದು ತಿಳಿಯಕೂಡದು ಅದು ಮಹಾಕಷ್ಟದ ಕೆಲಸ ಬಸವಣ್ಣನಲ್ಲಿಯೂ ಎಲ್ಲಿಯೋ ಸುಪ್ತದಲ್ಲಿ ನಾನು ಎಂಬುದು ಅಡಕವಾಗಿತ್ತು ಅಂತೆಯೇ ಅವನು

ತನುವ ಬೇಡಿದಡೀವೆ ಮನವ ಬೇಡಿದಡೀವೆ ಧನವ ಬೇಡಿದಡೀವೆ
ಬೇಡು ಬೇಡಲೆ ಹಂದೇ ಕಣ್ಣುಬೇಡಿದಡೀವೆ
ತಲೆಯ ವೇಡಿದಡೀವೆ
ಕೂಡಲಸಂಗಮದೇವಾ ನಿಮಗಿತ್ತು ಶುದ್ಧನಾಗಿಪ್ಪೆ ನಿಮ್ಮ ಪುರಾತನರ ಮನೆಯಲ್ಲಿ

ಎಂದಾಗ ಅಲ್ಲಮನು ಅದನ್ನು ಖಂಡಿಸಿದ ತನು ಮನ ಧನಗಳೆಲ್ಲ ಗುರುಲಿಂಗ ಜಂಗಮರ ಸ್ವತ್ತೆಂದು ತಿಳಿಹೇಳಿದನು ನೀನು ಕೊಡುವುದು ಏನು? ಯಾರಿಗೆ ನೀನು ದಾಸೋಹಮಾಡಬೇಕೆಂದಿರುವೆ? ಇದೇನು ಈ ಪೂಜೆ ಈ ಆರಾಧನೆಗಳ ಗೊಂದಲ? ದೇವರು ಬೇಡುವುದಕ್ಕೆ ತಿರುಕನೆ? ಎಂದು ಕೇಳಿದಾಗ ಆತ್ಮಾರ್ಪಣವೇ ನಿಜವಾದ ಭಕ್ತಿ ಎಂಬುದನ್ನು ತಿಳಿದುಕೊಂಡು ಬಸವಣ್ಣ ನಿರಹಂಭಾವಿಯಾಗಿ

"ತನುವಕೊಟ್ಟೆನೆಂದು ನುಡಿದು
ಗುರುವಚನಕ್ಕೆ ದೂರವಾದೆ-
ಮನವ ಕೊಟ್ಟೆನೆಂದು ನುಡಿದು
ಲಿಂಗಮುಖಕ್ಕೆ ದೂರವಾದೆ-
ಧನವಕೊಟ್ಟೆನೆಂದು ನುಡಿದು
ಜಂಗಮ ಮುಖಕ್ಕೆ ದೂರವಾದೆ
ಕೂಡಲ ಸಂಗಮದೇವಯ್ಯ
ನಿಮಗೆ ಮಾಡಿದೆನೆಂದು ನುಡಿದು
ಕೆಟ್ಟಕೇಡಿಂಗೆ ಕಡೆಯಿಲ್ಲ"

ಎಂದು ಪಶ್ಚಾತ್ತಾಪಿಯಾಗಿ-

"ಮಾಡುವಾತ ನಾನಲ್ಲಯ್ಯ!
ನೀಡುವಾತ ನಾನಲ್ಲಯ್ಯ!
ಬೇಡುವಾತ ನಾನಲ್ಲಯ್ಯ!
ನಿಮ್ಮ ಕಾರುಣ್ಯವಲ್ಲದೆ, ಎಲೆದೇವಾ!
ಮನೆಯ ತೊತ್ತಲಸಿದರೆ
ಒಡವೆ ಮಾಡಿಕೊಂಬಂತೆ ನಿನಗೆ ನೀನೇ
ಮಾಡಿಕೋ ಕೂಡಲಸಂಗಮದೇವಾ"

ಎಂದು ಶರಣಾಗತನಾದನು ಇದು ಬಸವಣ್ಣನ ಭಕ್ತಿ ಸಾಧನೆ ಆತನು ತಿಳಿದುಕೊಂಡು ನಡೆಸಿದ ದಾಸೋಹ

ಬಸವಣ್ಣನು ತಿಳಿದುಕೊಂಡ ದಾಸೋಹದ ಪರಿಯಲ್ಲಿ ಶಿವಶರಣರೆಲ್ಲ ಮುಮ್ಮುಖವಾಗಿರುವ ದಾಸೋಹದ ನೆಲಗಟ್ಟನ್ನು ಅನುಭಾವದಿದ ಅರಿತು ಸಮಾಜವನ್ನು ಪುನರ್ ರಚಿಸುವುದರಲ್ಲಿ ತೊಡಗಿದರು ಆ ಪ್ರಕಾರ ದಾಸೋಹದಲ್ಲಿ ಲಿಂಗದೀಕ್ಷೆ ಕೊಟ್ಟು ವಿದ್ಯಾಭ್ಯಾಸ ಮಾಡಿಸಿದ ಗುರುವಿನ ಸೇವೆಯನ್ನು ಮಾಡುವುದೇ ಗುರುದಾಸೋಹವೆಂದೂ, ಲಿಂಗ ಪೂಜೆಯಿಂದ ಧ್ಯಾನದಲ್ಲಿ ಮನಸ್ಸನ್ನು ಏಕಾಗ್ರಗೊಳಿಸಿ ಏಕಾಗ್ರತೆಯನ್ನು ಸಾಧಿಸಿಕೊಳ್ಳುವುದೇ ಲಿಂಗದಾಸೋಹವೆಂದೂ ಕಾಯಕಮಾಡಿ ಸಂಪಾದಿಸಿದ ಧನವನ್ನು ಸಮಾಜದ ಆರ್ಥಿಕ ಅಭಿವೃದ್ಧಿಗಾಗಿ ಜಂಗಮಕ್ಕೆ ನ್ಯಾಸವಾಗಿ ಕೊಡುವುದೇ ಜಂಗಮದಾಸೋಹವೆಂದು ಈ ದಿಸೆಯಲ್ಲಿಯ ಪರಿಭಾಷೆ ಇದನ್ನಲ್ಲ ಅರಿತಾಗ ಯಾರು ಯಾರಿಗೆ ಋಣಿ ಎಲ್ಲವೂ ಪರಮಾತ್ಮಮಯ ಹೀಗೆಂದು ಸುಮ್ಮನೇ ಕುಳಿತರಾಗದು! ಕಾಯಕದಲ್ಲಿ ಇದೆಲ್ಲವನ್ನೂ ಸಾಧಿಸುವ ಪರಿಯೇ ದಾಸೋಹ ಭೂಮಿಗೆ ಭಾರವಾಗದ ರೀತಿಯಲ್ಲಿ ಬದುಕುವುದೇ ದಾಸೋಹ ದುಡಿಮೆ ಉತ್ಪಾದನೆ ವಿತರಣೆಗಳು ಮೇಲಿನ ಅಧ್ಯಾತ್ಮದ ತಿಳಿವಳಿಕೆಯ ಬೆಳಕಿನಲ್ಲಿ ಸಾಗುವುದೇ ದಾಸೋಹ ಈ ಸಂಬಂಧದಲ್ಲಿ ಶಿವಶರಣರು ಹಾಕಿದ ನಿಬಂಧನೆಗಳನ್ನು ಅನುಭವಮಂಟಪದಲ್ಲಿ ಒರೆಗೆ ಹಚ್ಚಿ ಹೊಳಪಿಸಿದ ವಚನಕಾರರ ವಚನಗಳ ಆಧಾರದಿಂದ ಹೀಗೆ ಕ್ರೋಢೀಕರಿಸಬಹುದು

ಎಲ್ಲರಿಗೂ ದುಡಿಮೆಯ ಅವಕಾಶವಿರಬೇಕು ಮತ್ತು ಎಲ್ಲರೂ ದುಡಿಯಬೇಕು ದುಡಿಮೆಗೆ

## ಗಮನಿಕೆ

ವಿವಿಧ ಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ

* ಸಪ್ತಗಿರಿಯನ್ನು ಕೋರುವವರು ಪ್ರತಿತಿಂಗಳಿನಲ್ಲಿ ೧೫ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ ಹೊಸ ಚಂದಾ' ಎಂದು ಬರೆಯಬೇಕು ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು

**ಸಂಪಾದಕರು**
ಸಪ್ತಗಿರಿ
ಟಿ ಟಿ ಡಿ
ತಿರುಪತಿ-೫೧೭೫೦೧


ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು.
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

ಪಡೆಯುವ ಕೂಲಿ ಸ್ವಲ್ಪ ಕಡಮೆಯೇ ಇರಬೇಕೆಂಬುದು ಸ್ವತ ಕಾರ್ಮಿಕನ ನಿರೀಕ್ಷೆಯಾದರೆ - ಸ್ವಲ್ಪ ಹೆಚ್ಚಾಗಿಯೇ ಕೊಡಬೇಕೆಂಬುದು ಗ್ರಾಹಕನ ನಿಲುವು ಯಾರೂ ಐಶ್ವರ್ಯವನ್ನು ಕ್ರೋಢೀಕರಿಸಬಾರದೆಂಬುದು ಆದರ್ಶವಾದರೂ - ಲೌಕಿಕ ಹಕ್ಕಿನಿಂದ ಬಂದ ಐಶ್ವರ್ಯವನ್ನು ತನ್ನ ಸ್ವತ್ತೆಂದು ಭಾವಿಸದೆ ಗುರುಲಿಂಗಜಂಗಮಕ್ಕೆ ಅರ್ಪಿತವಾಗಲು ತನ್ನಲ್ಲಿ ನ್ಯಾಸವಾಗಿರುವ ಧರ್ಮದತ್ತಿಯೆಂದು ಭಾವಿಸಿ ಅದಕ್ಕನುಸಾರವಾಗಿ ನಡೆಯಬೇಕು ಶಿವಭಕ್ತನಾದವನು ಯಾರಿಂದಲೇ ಆಗಲಿ ಯಾವ ವಿಧವಾದ ಸಂಭಾವನೆಯನ್ನೂ ಸ್ವೀಕರಿಸಬಾರದು ಶಿವಭಕ್ತನಾದವನು ಗುರುಲಿಂಗಜಂಗಮ ದಾಸೋಹಕ್ಕಾಗಿ ಯಾವ ಅನ್ಯಧರ್ಮೀಯನ ಕೈಕೆಳಗಾದರೂ ಕಾಯಕ ಮಾಡಬಹುದು ಶಿವಭಕ್ತರಿಗೆ ಎಡ್ಡಿಯ ಆಧಾರದ ಮೇಲೆ ಹಣವನ್ನು ಸಾಲವಾಗಿ ಕೊಡಬಾರದು ಹಿಂತಿರುಗಿಸದಿದ್ದರೂ ಒತ್ತಾಯ ವಿಲ್ಲದ ಸಹಾಯಧನವಾಗಿ ಕೊಡಬೇಕು ಸಮಾಜದಲ್ಲಿ ಉಳ್ಳವರಿಗೆ ಮತ್ತು ಏನೂ ಇಲ್ಲದವರಿಗೆ ಸಮಾನವಾದ ಹಕ್ಕು ಬಾಧ್ಯತೆಗಳಿವೆ ಹೆಣ್ಣು ಗಂಡುಗಳಿಬ್ಬರೂ ಎಲ್ಲಂದರಲ್ಲೂ ಸಮಾನರು —

ಹೀಗೆ ಇದನ್ನೆಲ್ಲ ಅನುಷ್ಠಾನಕ್ಕೆ ತಂದರೆ ಸುಖೀ ರಾಜ್ಯ ನಿರ್ಮಾಣ ಅದೇ ಸಾಧಿಸಬೇಕಾದ ದಾಸೋಹದ ಗುರಿ

ಭಕ್ತಿ ಮಾರ್ಗವು ಸಾಧಿಸಿದ ದಾಸೋಹ ಮಹಿಮೆಯು ಹರಿದಾಸ ಸಾಹಿತ್ಯದಲ್ಲಿಯೂ ಒತ್ತು ಪಡೆದಿದೆ ಹರಿದಾಸರೂ ಶಿವಶರಣರಂತೆ ಕಾಯಕವನ್ನೇ ನಂಬಿ ಜೀವನ ತತ್ತ್ವವನ್ನು ಪ್ರಸಾರಮಾಡಿದರು ಗುಡಿಸಲು ಗುಡಿಸಲಿನ ಒಳ ಒಳಗೂ ಹೋಗಿ ಮಾನವಧರ್ಮದೊಡ್ಡದು ಇದನ್ನು ಹಾಳುಮಾಡಬಾರದೆಂದು ಬೋಧಿಸಿ ಜೀವನದಲ್ಲಿ ವಿಶ್ವಾಸಮೂಡಿಸಿ ಪುರುಷಾರ್ಥಗಳನ್ನು ಸತ್ಯಶೀಲಗಳನ್ನು ಆಧರಿಸಿ ಸಾಧಿಸಲು ಹಚ್ಚಿದವರು ಅಂತೆಯೇ ಅವರೆಲ್ಲ ದಾಸ ಎಂಬ ಪದಕ್ಕೆ ಮಹತ್ವಕೊಟ್ಟರು ಈ ಪದದ ಒಳಗೆಲ್ಲ ಸರ್ವಸಮರ್ಪಣಾಭಾವವು ಸೇರಿದೆ ಮಿಡಿದಿದೆ ಸೇವಾಬುದ್ಧಿಯ ವಿಕಾಸದ ಪ್ರಬುದ್ಧತೆಯೇ ಇಲ್ಲಿ ಪೂರ್ಣ ದರ್ಶನವನ್ನು ಮಾಡಿಸಿಕೊಡುವಲ್ಲಿ ಸಾರ್ಥಕವಾಗಿದೆ ಇದನ್ನೆಲ್ಲ ದಾಸರು ಶ್ರವಣ ಕೀರ್ತನ ಸ್ಮರಣ ಪಾದಸೇವನ ಅರ್ಚನ ವಂದನ ಉಪಾಸನ ಸಖ್ಯ ಆತ್ಮನಿವೇದನ - ಹೀಗೆ ಭಕ್ತಿಯ ಒಂಬತ್ತು ಮೆಟ್ಟಲುಗಳಿಂದ ಸಾಗಿ ಪೂರ್ಣಜ್ಞಾನಿಗಳಾಗಿ ಬದುಕನ್ನು ಸುಂದರಗೊಳಿಸಿದ್ದಾರೆ ಏಕೆಂದರೆ ಒಂಬತ್ತರ ಸಂಖ್ಯೆಯು ಹೆಚ್ಚು ಕಡಮೆಯಾಗದೆ ನಡೆಯುವ ಮಗ್ಗಿ ಅಂತೆಯೇ ದಾಸರು ಸರ್ವಸ್ವವನ್ನೂ ಪರಮಾತ್ಮನಿಗೆ ಅರ್ಥಾತ್ ಜನಾರ್ದನನಿಗೆ ಅರ್ಥಾತ್ ಜನತಾ ಜನಾರ್ದನನಿಗೆ ಅರ್ಪಿಸಿ ತಾವು ತಿಳಿದುಕೊಂಡು ಬಾಳಿದ ಜೀವನ ತತ್ತ್ವವನ್ನು ಅಂತ ಕರಣಕ್ಕೆ ತಟ್ಟುವಂತೆ ಜಡವೂ ಕೊನರುವಂತೆ ಮಾಡಿದರು ಅಷ್ಟಾನೆ ನೀಗಿ ಸಮಾಜದಲ್ಲಿ ಸಮಾನತೆ ತರಲು ಹೆಣಗಾಡಿದರು

ದಾಸರು ನಡೆದ ನವ ವಿಧ ಭಕ್ತಿಯ ಮೆಟ್ಟಲುಗಳಲ್ಲಿ ಕೊನೆಯದು ಆತ್ಮನಿವೇದನೆ ಎಂದು ಈಗಾಗಲೇ ಮೇಲೆ ತಿಳಿಸಿದೆ ಈ ಆತ್ಮನಿವೇದನೆಯೇ ಸರ್ವಾರ್ಪಣಾಭಾವ ಶಿವಶರಣರು ಕಂಡುಕೊಂಡ ತ್ರಿವಿಧದಾಸೋಹದ ಇಂಗಿತವೂ ಇದೆ ಈ ಸರ್ವ ಸಮರ್ಪಣಾಭಾವದಲ್ಲಿ ದಾಸಮಾರ್ಗದಲ್ಲಿಯ ಸಾಧಕನು

ತನ್ನ ಸರ್ವಸ್ವವನ್ನು ಪರಮಾತ್ಮನಲ್ಲಿ ಅರ್ಪಿಸಿ ತನ್ನ ಸ್ವತಂತ್ರ ವ್ಯಕ್ತಿತ್ವವನ್ನು ನಷ್ಟಪಡಿಸಿ ತಾನು ಕೇವಲ ನಿಮಿತ್ತಮಾತ್ರನಾಗಿ ಇರಲು ಹವಣಿಸುವ

ಯತಾರ್ಥವಾಗಿ ಎಲ್ಲವನ್ನು ಮಾಡುವವನು ಮಾಡಿಸುವವನು ಪರಮಾತ್ಮನೇ ಮನುಷ್ಯನು ಕೇವಲ ಅಜ್ಞಾನದಿಂದ ಅಹಂಕಾರ ಮೂಢನಾಗಿ ನಾನು ಎಂಬುದನ್ನು ನಿರ್ಮಿಸಿ ತದವಲಂಬನದಿಂದ ಜೀವಿಸಲು ಹವಣಿಸುವನು ಹಾಗೆ ಅನೇಕ ದು ಖ ಪರಂಪರೆಗೆ ಒಳಗಾಗುವನು ಈ ನಾನು ಎಂಬುದನ್ನು ಅವನು ಎಷ್ಟರಮಟ್ಟಿಗೆ ನಷ್ಟಪಡಿಸಿ ಅದರ ಸ್ಥಾನದಲ್ಲಿ ಪರಮಾತ್ಮನನ್ನು ಸ್ಥಾನಾಪನ್ನ ಮಾಡುವನೋ ಅಷ್ಟರಮಟ್ಟಿಗೆ ಅವನು ಮುಕ್ತನಾಗುವನು



# ತಿ ತಿ ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ

ಶ್ರೀನಿವಾಸನ ಹಾಡುಗಳು ಭಾಗ ೨ (ಶ್ರೀಪಾದರಾಜರು ವ್ಯಾಸರಾಯರು ವಾದಿರಾಜರು ಕನಕದಾಸರು) ೪ ೫೦

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) ವಿ ಬಾದರಾಯಣ ಮೂರ್ತಿ ೧೨ ೫೦

ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ) ಬನ್ನಂಜೆ ಗೋವಿಂದಾಚಾರ್ಯ ೭ ೦೦

ಕೇಶವಾದಿ ರೂಪಗಳು (ಕನ್ನಡ ತೆಲುಗು ಆಂಗ್ಲ ಹಿಂದಿ ಚಿತ್ರವಿವರಣೆ) ಸಂ ಕೆ ಅಪ್ಪಣ್ಣಾಚಾರ್ಯ ೩ ೭೫

ಕರ್ನಾಟಕ ಹರಿದಾಸರು (ಕನ್ನಡ ತೆಲುಗು ಆಂಗ್ಲ ಹಿಂದಿ, ಚಿತ್ರವಿವರಣೆ) ಸಂ ಕೆ ಅಪ್ಪಣ್ಣಾಚಾರ್ಯ ೨ ೨೫

ಸ್ತೋತ್ರ ಕುಸುಮಮಾಲಾ ಸಂ ವೆಂಕಟಾಚಲ ೩ ೦೦

ಆಚಾರಗಳು ಆಡಂಬರಗಳು ಕೆ ಚಂದ್ರಮೌಳಿ ೦ ೪೦

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) ೦ ೫೦

" (ಕನ್ನಡ ಲಿಪಿಯಲ್ಲಿ) ೦ ೧೨

### ಮಕ್ಕಳಿಗಾಗಿ

ಶ್ರೀಪಾದರಾಜರು ಎಂ ಎಸ್ ಗುಂಡೂರಾವ್ ೦ ೭೫

ಮಹಿಪತಿದಾಸರು ಶಾನಭಾಗ ೦ ೮೫

ಪ್ರಸನ್ನ ವೆಂಕಟದಾಸರು ವಿ ಬಾದರಾಯಣಮೂರ್ತಿ ೦ ೮೦

ಗೋಪಾಲದಾಸರು ರುಕ್ಮಿಣಿಗಿರಿಮಾಜಿ ೦ ೭೫

### ಹಿಂದಿ

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ ಡಾ ಎಂ ಸಂಗಮೇಶಂ ೦ ೨೦

ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) ೧೧ ೦೦

ತೀರ್ಥರಾಜ ತಿರುಪತಿ ಡಾ ಎಂ ಸಂಗಮೇಶಂ ೧ ೫೦

### ಸಂಸ್ಕೃತ

ಶ್ರೀ ವೇಂಕಟೇಶ್ವರ ಸುಪ್ರಭಾತಂ ೦ ೧೨

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ ೦ ೬೨

ಕಠೋಪನಿಷತ್ ಡಾ ಕೆ ಸಿ ವರದಾಚಾರಿ ಹಾಗೂ ಡಾ ಡಿ ತಾತಾಚಾರ್ಯ ೧೫ ೦೦

ಮಾರ್ಕಂಡೇಯ ಸಂಹಿತಾ ೧೮ ೦೦

ತತ್ತ್ವಸಂಖ್ಯಾನಂ ಆರ್ ರಾಮಮೂರ್ತಿ ಶರ್ಮಾ ೨ ೦೦

ಬ್ರಹ್ಮಸೂತ್ರ ಭಾಷ್ಯ (ಭಾಗ ೧) ಆರ್ ರಾಮಮೂರ್ತಿ ಶರ್ಮಾ ೩೦ ೦೦

ಅಲಂಕಾರ ಸಂಗ್ರಹ ಸಂ ಕೆ ಭಾಸ್ಕರರಾವ್ ೧೬ ೦೦

ಸೀತಾರಾಮಾಂಜನೇಯಂ ಡಾ ಡಿ ಅರ್ಕಸೋಮಯಾಜಿ ೫೦ ೦೦

ಪ್ರಶ್ನೋಪನಿಷತ್ ೧೧ ೦೦

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರ ಸಂ ಡಾ ಎಸ್ ಬಿ ರಘುನಾಥಾಚಾರ್ಯ ೨೫ ೦೦

೧೦೦೦ ರೂಗಳನ್ನು ಮಿರಿದ ಪುಸ್ತಕಗಳ ಕೊಳ್ಳುವಿಕೆಗೆ ೩೦ಶತಾಂಶ ರಿಯಾಯಿತಿಯೂ ೫೦೦ ರೂಗಳಿಂದ ೧೦೦೦ ರೂ ವರೆಗೆ ೨೫ಶತಾಂಶ ರಿಯಾಯಿತಿಯೂ ೧೦೦ ರೂ ಗಳಿಂದ ೫೦೦ ರೂ ವರೆಗೆ ೧೫ಶತಾಂಶ ರಿಯಾಯಿತಿಯೂ ಉಂಟು

ಅಂಚೆವೆಚ್ಚ ಪ್ರತ್ಯೇಕ

ಕೂಡಲೇ ಬರೆಯಿರಿ

ಸೇಲ್ಸ್‌ವಿಂಗ್ ಆವ್ ಪಬ್ಲಿಕೇಷನ್ಸ್,
ತಿ ತಿ ದೇ ತಿರುಪತಿ

ಈ ಭಾವವು ಸರ್ವ ಸಮರ್ಪಣಭಾವವು ನೆಲೆಗೊಂಡಿತೆಂದರೆ ಭಕ್ತನು ಸಂಪೂರ್ಣರಾಗಾತ್ಮಿಕಾ ಭಕ್ತಿಯಲ್ಲಿ ನಿಮಗ್ನನಾಗುವನು ಆ ಬಳಿಕ ಅವನಿಗೆ ತನ್ನದೆಂಬುದು ಏನೂ ಉಳಿಯದು ಅವನ ಚಲನವಲನಾದಿ ಸಾಮಾನ್ಯ ಕ್ರಿಯೆಗಳು ಕೂಡ ಪರಮಾತ್ಮನನ್ನೆ ಕುರಿತು ನಡೆಯುವವು ಸರ್ವತೋಪರಿ ಸರ್ವಭಾವದಿಂದ ಸರ್ವಕಾಲದಲ್ಲಿ ಈ ಭಕ್ತನು ಪರಮಾತ್ಮನಲ್ಲಿ ಲೀನನಿರುವನು, ಭಕ್ತಿರಸದಲ್ಲಿ ಮಗ್ನವಿರುವನು ಅವನಿಗೆ ತನ್ನ ಇಲ್ಲವೆ ಜಗತ್ತಿನ ಪರಿವೆ ಇರಲರಿಯದು ಸರ್ವರಲ್ಲಿ ಈಶ್ವರಾಂಶವನ್ನು ಕಂಡು ಅವನು ವರ್ತಿಸುವನು ಈ ಭಾವದಲ್ಲಿರುವವನು ಯಾವಾಗಲೂ ಒಂದು ಬಗೆಯ ಉನ್ಮೀಲಿತ ಅವಸ್ಥೆಯಲ್ಲಿರುವನು ಈ ಸ್ಥಿತಿಗೆ ಈಶ್ವರೀ ಪ್ರೇಮೋನ್ಮಾದ ಸ್ಥಿತಿ ಎನ್ನಬಹುದು ವಾಸುದೇವ ಸರ್ವಂ ಎಂಬುದು ಅವನ ಧ್ಯೇಯವಾಕ್ಯವು ಅವನು ಏನು ಮಾಡಿದರೂ ಅದನ್ನು ಪೂಜೆ ಎಂಬ ಭಾವನೆಯಿಂದ ಪರಮಾತ್ಮನಿಗೆ ಅರ್ಪಿಸುತ್ತಲೇ ಇರುವನು ಆದುದರಿಂದ ಸರ್ವ ಕ್ರಿಯೆ- ಪ್ರತಿಕ್ರಿಯೆಗಳೆಲ್ಲವೂ ಪರಮಾತ್ಮಮಯವಾಗಿ ಹೋಗುವುವು

ಆದ್ದರಿಂದಲೇ ಸಾಧಕನು "ನನ್ನಿಂದ ನಾನೇ ಜನಿಸಿ ಬಂದೆನೆ ದೇವಾ" ನಾ ನಿನಗೇನು ಬೇಡುವುದಿಲ್ಲ ಎನ್ನ ಹೃದಯ ಮಂಟಪದೊಳು ನಿಂದಿರೋ ಕೃಷ್ಣ ನಾನ್ಯಾಕೆ ಬಡವನು ನಾನ್ಯಾಕೆ ಪರದೇಶಿ ಶ್ರೀನಿಧೇ ಹರಿ ಎನಗೆ ನೀನಿರುವತನಕ ಎಂಬ ಪ್ರಶ್ನೆಗಳ ಸರರವನ್ನು ಪರಮಾತ್ಮನೊಡನೆ ನಡೆಸುತ್ತಾನೆ ಈ ಭಾವವನ್ನು ಇನ್ನಷ್ಟು ನಿಚ್ಚಳಗೊಳಿಸುತ್ತದೆ ಕನಕದಾಸರ ಈ- ಕೆಳಗಿನ

ತನು ನಿನ್ನದು ಜೀವನ ನಿನ್ನದು ಸ್ವಾಮಿ
ಅನುದಿನದಲಿ ಬಾಹ ದು ಖ ನಿನ್ನದಯ್ಯಾ"

ಎಂಬ ಕೀರ್ತನೆ ಅಂತೆಯೇ ಅವರ ಹಂಬಲ ಜನತಾ ಜನಾರ್ದನನಿಗೆ

ದಾಸನ್ನ ಮಾಡಿಕೋ ಸ್ವಾಮಿ ಸೇವಕನೆಲೊ
ನಾನು ನಿನ್ನಯ ಪಾದಸೇವೆ ನೀಡೆಲೊ ನೀನು"
ದಾಸೋಹಂ ದಾಸೋಹಂ ವಾಸುದೇವ ಎಂದು

ಇಂಥ ಪ್ರವೃತ್ತಿಯವರ ಧರ್ಮವನ್ನು ಸ್ಪಷ್ಟಗೊಳಿಸುವ ಸೂತ್ರರೂಪಿ ವ್ಯಾಖ್ಯಾನ ಇಲ್ಲಿದೆ

ವಿಷವನುಣಿಸಿದವಗೆ ಷಡ್ರಸವನುಣಿಸಲುಬೇಕು
ಅಸೂಯೆ ಪಡುವವನ ಪೋಷಿಸಲು ಬೇಕು
ಹುಸಿದು ಮನೆಕೊಂಬುವನ ಹಾಡಿಸಲು ಬೇಕು
ಅಸಿಯಲಿರಿದವನ ಮಗನ್ನೆಸರಿಡಲು ಬೇಕು ||
ಎಂದಿಗೂ ಸೇರದವನ ಹಾಡಿ ಹರಸಲು ಬೇಕು
ಕೊಂದವನ ಗೆಳೆತನವ ಮಾಡಬೇಕು
ಹಿಂದೆ ನಿಂದಿಸುವವನ ವಂದಿಸುತಿರಬೇಕು
ಬಂಧನ ದೊಳಿಟ್ಟವನ ವಂದಿಸುತಿರಬೇಕು ||
ಕೊಂಡೊಯ್ದು ಕೊಲಿಸುವನ
ಕೊಂಡಾಡುತಿರಬೇಕು
ಕಂಡರಾಗದವನ ಹೊಗಳಬೇಕು ||

ಹೀಗೆ ಸಾಧಿಸಿ ದಾಸರಾದವರಿಗೆ ಕೋಲೆ ಮನದ ಚಿಂತೆಯಿಲ್ಲ ಆದರೆ ನಿಶ್ಚಲತೆಯು ಮನದಲ್ಲಿದ್ದು ತಾಳ್ಮೆಯೂ ನೆಲೆಯಾಗಿ ತಪಸ್ಸಿನ ಸಿದ್ಧಿಯು ಅಲ್ಲಿರುತ್ತದೆ ಅಂತಹಂಗ ಕುಲವಿಲ್ಲ ನೆಲವಿಲ್ಲ ಹೊರೆಯಿಲ್ಲ ಅಂತಹರ ಹೊರ ಒಳಗಣ್ಣುಗಳಿಗೆ ಕಾಣುವುದೆಲ್ಲ,

"ವಿಶ್ವತೋಮುಖ ನೀನೆ ವಿಶ್ವತಶ್ಚಕ್ಷು ನೀನೆ
ವಿಶ್ವತೋಬಾಹು ನೀನೆ ವಿಶ್ವತೋ ಹಸ್ತ ನೀನೆ

ವಿಶ್ವತ ಶ್ರವಣ ನೀನೆ ವಿಶ್ವಧಾರಕ ನೀನೆ
ವಿಶ್ವವ್ಯಾಪಕ ಸರ್ವ ವಿಶ್ವಮಯನು ನೀನೆ

-ಎಂದರೆ ಎಲ್ಲ ಪರಮಾತ್ಮಮಯ

ಈ ಬಗೆಯ ಪ್ರವೃತ್ತಿಮಾರ್ಗವು ದಯಯೇ ಧರ್ಮದ ಮೂಲವಾಗಿರುವ ಪ್ರಪಂಚದಲ್ಲಿ ಎಲ್ಲ ಧರ್ಮಗಳಲ್ಲಿಯೂ ಇದೆ ಮಹಾತ್ಮ ಗೌತಮಬುದ್ಧನು ದು ಖದ ಮೂಲವನ್ನು ಕಂಡು ಹಿಡಿಯಲು ಅಷ್ಟಾಂಗಮಾರ್ಗದಿಂದ ಸಾಗಿ ಮನಸ್ಸಿಗೆ ಸಮಾಧಾನವನ್ನು ತಂದುಕೊಂಡುವಲ್ಲಿ ಜಗತ್ತನ್ನೆ ಎಚ್ಚರಿಸಿದ ಆತ ಬೋಧಿಸಿದ ದಯಾಧರ್ಮದ ಇಂಗಿತದಲ್ಲಿಯೂ ಮೇಲೆ ನಿವೇದಿಸಿದ ಶರಣರು ದಾಸರು ಕಂಡು ಹೇಳಿದ ಹಾಡಿದ ಮಾತುಗಳ ಬೆಳಕೇ ಇದೆ

ಈ ಬೆಳಕು ಜಗತ್ತಿನಲ್ಲಿ ಯಾವ ಅಂಚಿಗೂ ಬೇಕಾದದ್ದು ಈ ಬೆಳಕಿನ ತತ್ತ್ವಗಳನ್ನು ಅರಿತು ಬಾಳಿದರೆ ಲೋಕ ವೈರನಾಶವಾಗುತ್ತದೆ ತಿಳಿವಳಿಕೆಯಲ್ಲಿ ಅಂತರವಾದರೆ ಲೋಕವು ಅನಿಷ್ಟಕ್ಕೆ ಈಡಾಗುತ್ತದೆ ಆದ್ದರಿಂದ ಈ ಬೆಳಕಿನ ಪ್ರಭಾವದಲ್ಲಿ ಸದಾ ತಿಳಿವಳಿಕೆಯನ್ನು ಜಾಗ್ರತವಾಗಿಟ್ಟುಕೊಂಡು ಪರಸ್ಪರ ಹಾಲುಸಕ್ಕರೆಯಾಗಿ ಬದುಕಿನ ಸಾರ್ಥಕತೆಯನ್ನು ಪಡೆದು ಪಡೆದಪ್ಪನಾಗಲು ದಾಸೋಹ ಹೇಳಿದೆ ಬಾಳಿದೆ

ದಾಸೋಹ ಎಂದರೆ ಕೇವಲ ಅನ್ನದಾನವಲ್ಲ ಆ ಅನ್ನದಲ್ಲಿ ಪ್ರಸಾದ ಪಿದೆ ಆ ಪ್ರಸಾದವೆಂದರೆ - ತಾನು ಎಲ್ಲರಿಗಾಗಿ ಎಲ್ಲರೂ ತನಗಾಗಿ ಎಂಬ ಸ್ವಾದ ಅದು ಸದಾ ನೆಲೆಯಾಗಿ ನಿಲ್ಲುವ ಬೆಚ್ಚರ ಆದ್ದರಿಂದ ಅಲ್ಲಿ ಸರ್ವ ಸಮರ್ಪಣಾ ಭಾವದ ಕಾಯಕವೇ ನಿಷ್ಪನ್ನ ಅಂತೆಯೇ ಅಲ್ಲಿ ಶಬ್ದನಾದವು ಜೀವಂತದ ಕಳೆಯಾಗುತ್ತದೆ ಏಕೆಂದರೆ ಅನ್ನ ಬ್ರಹ್ಮನು ಸಾರ್ಥಕತೆಯನ್ನು ಪಡೆಯುವುದು ಶಬ್ದನಾದಗಳು ಸುಶ್ರಾವ್ಯವಾದಾಗ ಆದ್ದರಿಂದ ದಾಸೋಹದಲ್ಲಿ ಅನ್ನಸ್ವಾದದೊಡನೆ ಶಬ್ದನಾದಗಳು ಒಂದಾದಾಗ ಒಂದಕ್ಕೊಂದು ಪೂರಕವಾಗಿ ಪರಿಣಾಮ ಬೀರಿದಾಗ ಧರ್ಮಾರ್ಥ ಕಾಮ ಮೋಕ್ಷಗಳು ಬಹು ನಿಚ್ಚಳ ಅದೇ ಆತ್ಮಜ್ಯೋತಿಯ ಬೆಳಕು ಆ ಬೆಳಕಿನಲ್ಲಿ ಆತ್ಮೋದ್ಧಾರ ಆ ಮೂಲಕ ಸಮಾಜೋದ್ಧಾರ ಏಕೆಂದರೆ ತನ್ನ ತಾನರಿದಾಗಲಲ್ಲವೇ ಜಗದರಿವು ತನ್ನಂತೆ ಎಂಬುದು!

*

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸ-ಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ ೯ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇ-ಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು

**-ತಿ ತಿ ದೇ**



ಶ್ರೀ ವೆಂಕಟೇಶ್ವರ— ಮಿ ದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾದಿಕಾರಿ ತಿ ತಿ ದೇ ತಿರುಪತಿ ಇವರಿಗೆ 1 ಲಕ್ಷ ರೂಗಳ ಬಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ 3 ಲಕ್ಷ ಇದರಲ್ಲಿ ಶುಕ್ರವಾರದ ಅಬಿಷೇಕವೂ ಸೇರುವುದು

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ವೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದು ಬಾರಿಗೆ 10 ಶತಾಂಶ) ನಂತೆ, ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ ತಿ ದೇ ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು) ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ**

ತಿ ತಿ ದೇ ತಿರುಪತಿ

# ಶ್ರದ್ಧೆ

ಜ್ಞಾನದ ತಳಹದಿಯೇ ಶ್ರದ್ಧೆ ಶ್ರದ್ಧೆ ಶಕ್ತಿಯ ಸಂಜೀವಿನಿ ದೃಢ ನಂಬಿಕೆ, ವಿಶ್ವಾಸ ಮತ್ತು ಪ್ರಾಮಾಣಿಕ ಪರಿಶ್ರಮಕ್ಕೆ ಶ್ರದ್ಧೆ ಎಂದು ಕರೆಯಬಹುದು ಶ್ರದ್ಧೆ ಇಹ-ಪರಗಳ ಉನ್ನತಿಗೆ ಬುನಾದಿ ಬಾಳನ್ನು ಶೋಧಿಸಿ ಶುಚಿಯನ್ನು ಬೆಳೆಸಿಕೊಳ್ಳಬೇಕಾದರೆ ಶ್ರದ್ಧೆಯೇ ಮೂಲ ಧನ ಆದುದರಿಂದ ಉಪನಿಷತ್ತು–

ಶ್ರದ್ಧಯಾ ದೇಯಂ ಅಶ್ರದ್ಧಯಾಽದೇಯಂ

ಶ್ರದ್ಧೆಯಿಂದ ನೀಡು ಅಶ್ರದ್ಧೆಯಿಂದ ನೀಡಬೇಡ ಶ್ರೇಯಸ್ಕರವಲ್ಲ" ಎಂದು ಘೋಷಿಸುತ್ತದೆ

ವ್ಯಾಸಂಗದಿಂದ, ವಯಸ್ಸಿನಿಂದ, ತಿಳುವಳಿಕೆಯಿಂದ ಅದಕ್ಕೆ ಹೊಂದಿದ ನಡವಳಿಕೆಯಿಂದ ಇವುಗಳ ಸಂಯುಕ್ತ ಫಲವಾದ ಸ್ವಾನುಭವದಿಂದ ಯಾರು ಹಿರಿಯರಾಗಿದ್ದಾರೋ ಅವರಿಗೆ ಆಪ್ತರೆಂದು ಹೆಸರು ನಿಃಸ್ವಾರ್ಥರಾದ ಅಂಥವರು ಆಡಿದ ನುಡಿ ಆಪ್ತವಾಕ್ಯ' ಅಂತಹವರ ಮಾತನ್ನು ನಂಬುವುದು ಶ್ರದ್ಧೆ

ಹೇಗೆ ಶ್ರದ್ಧೆಯನ್ನು ಅಳವಡಿಸಿಕೊಳ್ಳಬೇಕು? ಎನ್ನುವುದಾದರೆ, ಶ್ರದ್ಧೆಯ ಪ್ರತೀಕವಾಗಿರುವರನ್ನು ಆದರ್ಶವಾಗಿಟ್ಟುಕೊಳ್ಳುವುದು ಸೂಕ್ತ ಸೇವಾಕಾರ್ಯಕ್ಕೆ ಹನುಮಂತ ಭಕ್ತಿಗೆ-ಭೀಷ್ಮಾಚಾರ್ಯರು ಸ್ನೇಹಕ್ಕೆ ಕುಚೇಲ, ತ್ಯಾಗಕ್ಕೆ ಕರ್ಣ ಹೀಗೆ ಹಲವಾರು ದೃಷ್ಟಾಂತಗಳನ್ನು ಕೊಡಬಹುದು ಶ್ರದ್ಧಾದಾರಿದ್ರ್ಯವೇ ವ್ಯಕ್ತಿತ್ವದ ವಿನಾಶಕ್ಕೆ ಕಾರಣ ನಮ್ಮಲ್ಲಿ ನಾವು ಶ್ರದ್ಧೆ ಇಡದೇ ಇರುವುದನ್ನೇ ವೇದಾಂತ ನಾಸ್ತಿಕತೆ ಎನ್ನುವುದು ಆತ್ಮಶ್ರದ್ಧೆ ನಮಗೆ ಮಹೋಪಕಾರಿ ಒಬ್ಬನಿಗೂ – ಮತ್ತೊಬ್ಬನಿಗೂ ಇರುವ ವ್ಯತ್ಯಾಸಕ್ಕೆ ಅವರಲ್ಲಿರುವ ಆತ್ಮಶ್ರದ್ಧೆಯೇ ಕಾರಣ ಆದರೆ ಈಗೀಗ ಶ್ರದ್ಧೆಯಿಂದ ನೋಡದ ಒಂದು ಭಯಂಕರ ರೋಗ. ನಮ್ಮ ಜನಾಂಗದ ನಾಡಿಯಲ್ಲಿ ಹರಿಯುತ್ತಿದೆ ಸ್ವಾಮಿ ವಿವೇಕಾನಂದರು ಬಲಿಷ್ಠರಾಗಿ ಆತ್ಮಶ್ರದ್ಧೆಯನ್ನು ಪಡೆಯಿರಿ ನಾವು ಅಧೋಗತಿಗೆ ಬಂದಿದ್ದರೆ ನಮ್ಮಲ್ಲಿ ನ್ಯೂನತೆಗಳಿದ್ದರೆ – ನಾವು ಆತ್ಮಶ್ರದ್ಧೆಯನ್ನು ಕಳೆದುಕೊಂಡ ದಿನದಿಂದ ಪ್ರಾರಂಭ" ಎನ್ನುತ್ತಾರೆ

ಶ್ರದ್ಧಾ ದೀವಿಗೆಯನ್ನು ಸ್ವಾಮಿ ಪುರುಷೋತ್ತಮಾನಂದರೂ ಹೀಗೆ ಹಚ್ಚಿಡಿ ಎನ್ನುತ್ತಾರೆ –

" ದೇವರಿದ್ದಾನೆ ಎಂಬ ನಂಬಿಗೆಯೇ ಶ್ರದ್ಧೆ, ದೇವರನ್ನು ಕರೆದರೆ ಬರ್ತಾನೆ ಎಂಬ ವಿಶ್ವಾಸವೇ ಸಂಕಲ್ಪ ಶ್ರದ್ಧೆ ದೇವರನ್ನು ಕರೀಬೇಕು ಎಂಬ ಪ್ರಾಮಾಣಿಕ ಪರಿಶ್ರಮವೇ ಆತ್ಮ ಶ್ರದ್ಧೆ" ಮನನ ಯೋಗ್ಯವಾದ ಸುಭಾಷಿತ ಶ್ರದ್ಧಾಜೀವನ ಸತತ ಯತ್ನದಿಂದ ಸಾಧ್ಯ ಆ ಪ್ರಯತ್ನ ಹೇಗಿರಬೇಕು ಎಂದಾಗ

ಯತನ ಕರ್ತವ್ಯವದು, ನಮಗೆ ವಿದ್ಯಾಭ್ಯಾಸ
ಹಿತ ಪರಿಜ್ಞಾನ ಯತ್ನಾನುಭವ ಫಲಿತ
ಸತತ ಯತ್ನದಿನಾತ್ಮಶಕ್ತಿ ಪರಿವರ್ಧಿಪುದು
ಯತನ ಜೀವನ ಶಿಕ್ಷೆ – ಮಂಕುತಿಮ್ಮ

(ಮಂಕುತಿಮ್ಮನ ಕಗ್ಗದಿಂದ)

## ಯುವವಾಣಿ

ಭಗವಂತನನ್ನು ಮೆಚ್ಚಿಸಲಿಕ್ಕೆ ಧ್ಯಾನ ನಾಮ ಜಪ, ಪೂಜೆ, ತಪಸ್ಸು ಮುಂತಾದವು ಇವೆ ಆದರೆ ಅವುಗಳ ಕ್ರಮ ಅರಿಯದವನೂ ಮನಪೂರ್ವಕವಾಗಿ ದೇವರನ್ನು ಮೆಚ್ಚಿಸಲು ಸಾಧ್ಯ – ಅದೇ ಶ್ರದ್ಧೆಯ ದಾರಿ ದೇವರು ಹೃದಯದ ಪರಿಶುದ್ಧತೆಗೆ ಮಾತ್ರ ಬೆಲೆ ನೀಡುತ್ತಾನೆ ಶ್ರದ್ಧೆಯು ಹಿಂದುವಿಗೆ ಸ್ವಾಭಾವಿಕ ಒಮ್ಮೆ ದೈವ ಭಕ್ತ ರಾಮಬಾಹು ಅವರ ಎಂಟು ವರ್ಷದ ಪುತ್ರ ಪಂಗಾರ್ಕರಿಗೆ ಅಪಸ್ಮಾರ ರೋಗ ಪ್ರಬಲವಾಗಿತ್ತು ಆಗ ರಾಮಬಾಹು ಗಾಡಿ ಮಾಡಿಕೊಂಡು ಅಲಂದಿ ಯಾತ್ರಾ ಸ್ಥಳಕ್ಕೆ ಬಂದರು ಇಂದ್ರಾಣಿ ನದಿಯಲ್ಲಿ ಹುಡುಗನಿಗೆ ಸ್ನಾನ ಮಾಡಿಸಿ ಬಹಳ ಭಕ್ತಿಯಿಂದ ಪೂಜಿಸಿ ಮಗನ ತಲೆಯನ್ನು ಸಂತ ಜ್ಞಾನೇಶ್ವರರ ವಿಗ್ರಹದ ಪಾದದಲ್ಲಿಟ್ಟು ಕಣ್ಣೀರನ್ನು ಸುರಿಸುತ್ತಾ "ಹೇ ಜ್ಞಾನೇಶ್ವರ, ನೀನೇ ನನ್ನ ತಾಯಿ ನನ್ನ ಮಗನನ್ನು ನಿನ್ನ ಪಾದದಲ್ಲಿ ಇಟ್ಟಿದ್ದೇನೆ ನನಗೆ ನಿನಗಿಂತ ಸಮರ್ಥ ವೈದ್ಯ ಬೇರೆ ತಿಳಿದಿಲ್ಲ ನಿನ್ನ ಚರಣಾಮೃತಕ್ಕಿಂತ ಹೆಚ್ಚಿನ ಔಷಧ ಗೊತ್ತಿಲ್ಲ ನೀನೇ ಇವನನ್ನು ಬದುಕಿಸು, ನಿನ್ನ ಕರುಣೆಗೆ ಇವನನ್ನು ಶರಣು ಮಾಡಿದ್ದೇನೆ ಎಂದು ಪ್ರಾರ್ಥಿಸಿದರು ಪರಮಾಶ್ಚರ್ಯ! ಕೆಲವೇ ದಿನಗಳಲ್ಲಿ ಹುಡುಗ ಪಂಗಾರ್ಕ ಮೂರ್ಛೆ ರೋಗದಿಂದ ಮುಕ್ತಿ ಹೊಂದಿದ ರಾಮಬಾಹುರವರ ಶ್ರದ್ಧೆ ಎಷ್ಟು ಆಳವಾದದ್ದಿರಬೇಕು ಭಗವಂತ ಅಂತಹ ಶ್ರದ್ಧೆಗೆ ಫಲ ನೀಡುತ್ತಾನೆ

ಶ್ರದ್ಧೆಯ ಬಗ್ಗೆ ಶ್ರೀ ಮದ್ಭಗವದ್ಗೀತಾದ ಸಪ್ತದಶಮೋಧ್ಯಾಯವೇ ಮೀಸಲಾಗಿದೆ ಪೂರ್ವ ಜನ್ಮದ ಸಂಸ್ಕಾರದಿಂದ ಹುಟ್ಟಿದ ದೇಹಿಗಳ ಶ್ರದ್ಧೆಯಲ್ಲಿ ಮೂರು ಬಗೆಯುಂಟು ಸಾತ್ವಿಕ ಶ್ರದ್ಧೆ ರಾಜಸ ಶ್ರದ್ಧೆ ಮತ್ತು ತಾಮಸ ಶ್ರದ್ಧೆ ಶ್ರದ್ಧೆ ಅವರವರ ಅಂತಕರಣಕ್ಕೆ ಅನುರೂಪವಾಗಿ ಉಂಟಾಗುತ್ತದೆ ಶ್ರದ್ಧೆಯ ಪರಿಣಾಮವಾಗಿದ್ದಾನೆ ಮಾನವ ಫಲಾಕಾಂಕ್ಷೆ ಇಲ್ಲದವರು ಶಾಸ್ತ್ರ ಸಮ್ಮತವಾದ ಯಜ್ಞವನ್ನು ಮಾಡುವರು ಸಾತ್ವಿಕ ಶ್ರದ್ಧೆಯುಳ್ಳವರು ಫಲಕ್ಕಾಗಿಯೇ ತೋರಿಕೆಗೆ ಯಜ್ಞವನ್ನು ಮಾಡುವರು ರಾಜಸ ಶ್ರದ್ಧೆಯುಳ್ಳವರು ದುಃಖಮಯವಾದ ಅತ್ಯಲ್ಪ ಸುಖಗಳು, ಪ್ರೇತ-ಭೂತ ಗಣಗಳನ್ನು ಆರಾಧಿಸುವರು ಮಂತ್ರಹೀನ ದಕ್ಷಿಣಾಶೂನ್ಯ ಅನ್ನದಾನ ಹೀನ ಯಜ್ಞವನ್ನು ಮಾಡುವರು ತಾಮಸ ಶ್ರದ್ಧೆಯುಳ್ಳವರು ಈ ದೃಷ್ಟಿಯಿಂದ ಗೀತಾಚಾರ್ಯ–

ಅಶ್ರದ್ಧಯಾ ಹುತಂ ದತ್ತಂ
ತಪಸ್ತಪ್ತಂ ಕೃತಂ-ಚ ಯತ್
ಅಸದಿತ್ಯುಚ್ಯತೇ ಪಾರ್ಥ
ನ ಚ ತತ್ಪ್ರೇತ್ಯನೋ -ಇಹ

ಅಶ್ರದ್ಧೆಯಿಂದ ಹೋಮ ದಾನ, ತಪಸ್ಸು ಕರ್ಮ ಮಾಡಿದಾಗ ಅದರಿಂದ ಸತ್ತ ಮೇಲೆಯೂ ಸುಖವಿಲ್ಲ ಇರುವವಾಗಲೂ ಸುಖವಿಲ್ಲ ಆದುದರಿಂದ ನಾವು ಮಾಡುವ ಕೆಲಸದ ಹಿಂದೆ ಇರುವ ಶ್ರದ್ಧೆಗೆ ಭಗವಂತ ಬೆಲೆ ಕೊಡುವನು ಇಂತಹ ಶ್ರದ್ಧೆಯೇ ಸಾರವುಳ್ಳದ್ದು

ಶ್ರದ್ಧೆಯ ವಿಚಾರವಾಗಿ ಗೀತೆಯಲ್ಲಿ ನಾಲ್ಕು ಮುಖ್ಯ ವಾಕ್ಯಗಳುಂಟು

1 ಶ್ರದ್ಧಾವಾನ್ ಲಭತೇ ಜ್ಞಾನಂ (ಶ್ರದ್ಧೆಯಿಂದ ಜ್ಞಾನ ಲಭಿಸುತ್ತದೆ)

2 ನ ಹಿ ಜ್ಞಾನೇನ ಸದೃಶಂ (ಜ್ಞಾನಕ್ಕೆ ಸಮಾನವಾದದ್ದು ಯಾವುದೂ ಇಲ್ಲ)

ಮುತ್ತೇಗೆರೆ ಅನಂತು

# ಶ್ರದ್ಧೆ

ಜ್ಞಾನದ ತಳಹದಿಯೇ ಶ್ರದ್ಧೆ ಶ್ರದ್ಧೆ ಶಕ್ತಿಯ ಸಂಜೀವಿನಿ ದೃಢ ನಂಬಿಕೆ ವಿಶ್ವಾಸ ಮತ್ತು ಪ್ರಾಮಾಣಿಕ ಪರಿಶ್ರಮಕ್ಕೆ ಶ್ರದ್ಧೆ ಎಂದು ಕರೆಯಬಹುದು ಶ್ರದ್ಧೆ ಇಹ-ಪರಗಳ ಉನ್ನತಿಗೆ ಬುನಾದಿ ಬಾಳನ್ನು ಶೋಧಿಸಿ ಶುಚಿಯನ್ನು ಬೆಳೆಸಿಕೊಳ್ಳಬೇಕಾದರೆ ಶ್ರದ್ಧೆಯೇ ಮೂಲ ಧನ ಆದುದರಿಂದ ಉಪನಿಷತ್ತು–

ಶ್ರದ್ಧಯಾ ದೇಯಂ ಅಶ್ರದ್ಧಯಾಽದೇಯಂ

ಶ್ರದ್ಧೆಯಿಂದ ನೀಡು ಅಶ್ರದ್ಧೆಯಿಂದ ನೀಡಬೇಡ ಶ್ರೇಯಸ್ಕರವಲ್ಲ" ಎಂದು ಘೋಷಿಸುತ್ತದೆ

ವ್ಯಾಸಂಗದಿಂದ, ವಯಸ್ಸಿನಿಂದ, ತಿಳುವಳಿಕೆಯಿಂದ ಅದಕ್ಕೆ ಹೊಂದಿದ ನಡವಳಿಕೆಯಿಂದ, ಇವುಗಳ ಸಂಯುಕ್ತ ಫಲವಾದ ಸ್ವಾನುಭವದಿಂದ ಯಾರು ಹಿರಿಯರಾಗಿದ್ದಾರೋ ಅವರಿಗೆ ಆಪ್ತರೆಂದು ಹೆಸರು ನಿಃಸ್ವಾರ್ಥರಾದ ಅಂಥವರು ಆಡಿದ ನುಡಿ ಆಪ್ತವಾಕ್ಯ ಅಂತಹವರ ಮಾತನ್ನು ನಂಬುವುದು ಶ್ರದ್ಧೆ'

ಹೇಗೆ ಶ್ರದ್ಧೆಯನ್ನು ಅಳವಡಿಸಿಕೊಳ್ಳಬೇಕು? ಎನ್ನುವುದಾದರೆ ಶ್ರದ್ಧೆಯ ಪ್ರತೀಕವಾಗಿರುವರನ್ನು ಆದರ್ಶವಾಗಿಟ್ಟುಕೊಳ್ಳುವುದು ಸೂಕ್ತ ಸೇವಾಕಾರ್ಯಕ್ಕೆ ಹನುಮಂತ, ಭಕ್ತಿಗೆ-ಭೀಷ್ಮಾಚಾರ್ಯರು ಸ್ನೇಹಕ್ಕೆ ಕುಚೇಲ, ತ್ಯಾಗಕ್ಕೆ ಕರ್ಣ ಹೀಗೆ ಹಲವಾರು ದೃಷ್ಟಾಂತಗಳನ್ನು ಕೊಡಬಹುದು ಶ್ರದ್ಧಾದಾರಿದ್ರ್ಯವೇ ವ್ಯಕ್ತಿತ್ವದ ವಿನಾಶಕ್ಕೆ ಕಾರಣ ನಮ್ಮಲ್ಲಿ ನಾವು ಶ್ರದ್ಧೆ ಇಡದೇ ಇರುವುದನ್ನೇ ವೇದಾಂತ ನಾಸ್ತಿಕತೆ ಎನ್ನುವುದು ಆತ್ಮಶ್ರದ್ಧೆ ನಮಗೆ ಮಹೋಪಕಾರಿ ಒಬ್ಬನಿಗೂ – ಮತ್ತೊಬ್ಬನಿಗೂ ಇರುವ ವ್ಯತ್ಯಾಸಕ್ಕೆ ಅವರಲ್ಲಿರುವ ಆತ್ಮಶ್ರದ್ಧೆಯೇ ಕಾರಣ ಆದರೆ ಈಗೀಗ ಶ್ರದ್ಧೆಯಿಂದ ನೋಡದ ಒಂದು ಭಯಂಕರ ರೋಗ. ನಮ್ಮ ಜನಾಂಗದ ನಾಡಿಯಲ್ಲಿ ಹರಿಯುತ್ತಿದೆ ಸ್ವಾಮಿ ವಿವೇಕಾನಂದರು "ಬಲಿಷ್ಠರಾಗಿ ಆತ್ಮಶ್ರದ್ಧೆಯನ್ನು ಪಡೆಯಿರಿ ನಾವು ಅಧೋಗತಿಗೆ ಬಂದಿದ್ದರೆ ನಮ್ಮಲ್ಲಿ ನ್ಯೂನತೆಗಳಿದ್ದರೆ – ನಾವು ಆತ್ಮಶ್ರದ್ಧೆಯನ್ನು ಕಳೆದುಕೊಂಡ ದಿನದಿಂದ ಪ್ರಾರಂಭ" ಎನ್ನುತ್ತಾರೆ

ಶ್ರದ್ಧಾ ದೇವಿಗೆಯನ್ನು ಸ್ವಾಮಿ ಪುರುಷೋತ್ತಮಾನಂದರೂ ಹೀಗೆ ಹಚ್ಚಿಡಿ ಎನ್ನುತ್ತಾರೆ –

ದೇವರಿದ್ದಾನೆ ಎಂಬ ನಂಬಿಗೆಯೇ ಶ್ರದ್ಧೆ, ದೇವರನ್ನು ಕರೆದರೆ ಭರ್ತಾನೆ ಎಂಬ ವಿಶ್ವಾಸವೇ ಸಂಕಲ್ಪ ಶ್ರದ್ಧೆ ದೇವರನ್ನು ಕರೀಬೇಕು ಎಂಬ ಪ್ರಾಮಾಣಿಕ ಪರಿಶ್ರಮವೇ ಆತ್ಮ ಶ್ರದ್ಧೆ" ಮನನ ಯೋಗ್ಯವಾದ ಸುಭಾಷಿತ ಶ್ರದ್ಧಾಜೀವನ ಸತತ ಯತ್ನದಿಂದ ಸಾಧ್ಯ ಆ ಪ್ರಯತ್ನ ಹೇಗಿರಬೇಕು ಎಂದಾಗ

ಯತನ ಕರ್ತವ್ಯವದು ನಮಗೆ ವಿದ್ಯಾಭ್ಯಾಸ  
ಹಿತ ಪರಿಜ್ಞಾನ ಯತ್ನಾನುಭವ ಫಲಿತ  
ಸತತ ಯತ್ನದಿನಾತ್ಮಶಕ್ತಿ ಪರಿವರ್ಧಿಪುದು  
ಯತನ ಜೀವನ ಶಿಕ್ಷೆ – ಮಂಕುತಿಮ್ಮ  
(ಮಂಕುತಿಮ್ಮನ ಕಗ್ಗದಿಂದ)

## ಯುವವಾಣಿ

ಭಗವಂತನನ್ನು ಮೆಚ್ಚಿಸಲಿಕ್ಕೆ ಧ್ಯಾನ, ನಾಮಜಪ ಪೂಜೆ ತಪಸ್ಸು ಮುಂತಾದವು ಇವೆ ಆದರೆ ಅವುಗಳ ಕ್ರಮ ಅರಿಯದವನೂ ಮನಪೂರ್ವಕವಾಗಿ ದೇವರನ್ನು ಮೆಚ್ಚಿಸಲು ಸಾಧ್ಯ – ಅದೇ ಶ್ರದ್ಧೆಯ ದಾರಿ ದೇವರು ಹೃದಯದ ಪರಿಶುದ್ಧತೆಗೆ ಮಾತ್ರ ಬೆಲೆ ನೀಡುತ್ತಾನೆ ಶ್ರದ್ಧೆಯು ಹಿಂದುವಿಗೆ ಸ್ವಾಭಾವಿಕ ಒಮ್ಮೆ ದೈವ ಭಕ್ತ ರಾಮಬಾಹು ಅವರ ಎಂಟು ವರ್ಷದ ಪುತ್ರ ಪಂಗಾರ್ಕರಿಗೆ ಅಪಸ್ಮಾರ ರೋಗ ಪ್ರಬಲವಾಗಿತ್ತು ಆಗ ರಾಮಬಾಹು ಗಾಡಿ ಮಾಡಿಕೊಂಡು ಅಲಂದಿ ಯಾತ್ರಾ ಸ್ಥಳಕ್ಕೆ ಬಂದರು ಇಂದ್ರಾಣಿ ನದಿಯಲ್ಲಿ ಹುಡುಗನಿಗೆ ಸ್ನಾನ ಮಾಡಿಸಿ ಬಹಳ ಭಕ್ತಿಯಿಂದ ಪೂಜಿಸಿ, ಮಗನ ತಲೆಯನ್ನು ಸಂತ ಜ್ಞಾನೇಶ್ವರರ ವಿಗ್ರಹದ ಪಾದದಲ್ಲಿಟ್ಟು ಕಣ್ಣೀರನ್ನು ಸುರಿಸುತ್ತಾ "ಹೇ ಜ್ಞಾನೇಶ್ವರ, ನೀನೇ ನನ್ನ ತಾಯಿ ನನ್ನ ಮಗನನ್ನು ನಿನ್ನ ಪಾದದಲ್ಲಿ ಇಟ್ಟಿದ್ದೇನೆ ನನಗೆ ನಿನಗಿಂತ ಸಮರ್ಥ ವೈದ್ಯ ಬೇರೆ ತಿಳಿದಿಲ್ಲ ನಿನ್ನ ಚರಣಾಮೃತಕ್ಕಿಂತ ಹೆಚ್ಚಿನ ಔಷಧ ಗೊತ್ತಿಲ್ಲ ನೀನೇ ಇವನನ್ನು ಬದುಕಿಸು ನಿನ್ನ ಕರುಣೆಗೆ ಇವನನ್ನು ಶರಣು ಮಾಡಿದ್ದೇನೆ ಎಂದು ಪ್ರಾರ್ಥಿಸಿದರು ಪರಮಾಶ್ಚರ್ಯ! ಕೆಲವೇ ದಿನಗಳಲ್ಲಿ ಹುಡುಗ ಪಂಗಾರ್ಕ ಮೂರ್ಛೆ ರೋಗದಿಂದ ಮುಕ್ತಿ ಹೊಂದಿದ ರಾಮಬಾಹುರವರ ಶ್ರದ್ಧೆ ಎಷ್ಟು ಆಳವಾದದ್ದಿರಬೇಕು ಭಗವಂತ ಅಂತಹ ಶ್ರದ್ಧೆಗೆ ಫಲ ನೀಡುತ್ತಾನೆ

ಶ್ರದ್ಧೆಯ ಬಗ್ಗೆ ಶ್ರೀ ಮದ್ಭಗವದ್ಗೀತಾದ ಸಪ್ತದಶಮೋಧ್ಯಾಯವೇ ಮೀಸಲಾಗಿದೆ ಪೂರ್ವಜನ್ಮದ ಸಂಸ್ಕಾರದಿಂದ ಹುಟ್ಟಿದ ದೇಹಿಗಳ ಶ್ರದ್ಧೆಯಲ್ಲಿ ಮೂರು ಬಗೆಯುಂಟು ಸಾತ್ವಿಕ ಶ್ರದ್ಧೆ, ರಾಜಸ ಶ್ರದ್ಧೆ ಮತ್ತು ತಾಮಸ ಶ್ರದ್ಧೆ ಶ್ರದ್ಧೆ ಅವರವರ ಅಂತಃಕರಣಕ್ಕೆ ಅನುರೂಪವಾಗಿ ಉಂಟಾಗುತ್ತದೆ ಶ್ರದ್ಧೆಯ ಪರಿಣಾಮವಾಗಿದ್ದಾನೆ ಮಾನವ ಫಲಾಕಾಂಕ್ಷೆ ಇಲ್ಲದವರು, ಶಾಸ್ತ್ರ ಸಮ್ಮತವಾದ ಯಜ್ಞವನ್ನು ಮಾಡುವರು ಸಾತ್ವಿಕ ಶ್ರದ್ಧೆಯುಳ್ಳವರು ಫಲಕ್ಕಾಗಿಯೇ ತೋರಿಕೆಗೆ ಯಜ್ಞವನ್ನು ಮಾಡುವರು ರಾಜಸ ಶ್ರದ್ಧೆಯುಳ್ಳವರು ದುಃಖಮಯವಾದ ಅತ್ಯಲ್ಪ ಸುಖಗಳು ಪ್ರೇತ-ಭೂತ ಗಣಗಳನ್ನು ಆರಾಧಿಸುವರು ಮಂತ್ರಹೀನ ದಕ್ಷಿಣಾಶೂನ್ಯ ಅನ್ನದಾನ ಹೀನ ಯಜ್ಞವನ್ನು ಮಾಡುವರು, ತಾಮಸ ಶ್ರದ್ಧೆಯುಳ್ಳವರು ಈ ದೃಷ್ಟಿಯಿಂದ ಗೀತಾಚಾರ್ಯ–

ಅಶ್ರದ್ಧಯಾ ಹುತಂ ದತ್ತಂ  
ತಪಸ್ತಪ್ತಂ ಕೃತಂ-ಚ ಯತ್  
ಅಸದಿತ್ಯುಚ್ಯತೇ ಪಾರ್ಥ  
ನ ಚ ತತ್ಪ್ರೇತ್ಯನೋ –ಇಹ

ಅಶ್ರದ್ಧೆಯಿಂದ ಹೋಮ, ದಾನ, ತಪಸ್ಸು, ಕರ್ಮ ಮಾಡಿದಾಗ ಅದರಿಂದ ಸತ್ತ ಮೇಲೆಯೂ ಸುಖವಿಲ್ಲ ಇರುವವಾಗಲೂ ಸುಖವಿಲ್ಲ ಆದುದರಿಂದ ನಾವು ಮಾಡುವ ಕೆಲಸದ ಹಿಂದೆ ಇರುವ ಶ್ರದ್ಧೆಗೆ ಭಗವಂತ ಬೆಲೆ ಕೊಡುವನು ಇಂತಹ ಶ್ರದ್ಧೆಯೇ ಸಾರವುಳ್ಳದ್ದು

ಶ್ರದ್ಧೆಯ ವಿಚಾರವಾಗಿ ಗೀತೆಯಲ್ಲಿ ನಾಲ್ಕು ಮುಖ್ಯ ವಾಕ್ಯಗಳುಂಟು

1 ಶ್ರದ್ಧಾವಾನ್ ಲಭತೇ ಜ್ಞಾನಂ (ಶ್ರದ್ಧೆಯಿಂದ ಜ್ಞಾನ ಲಭಿಸುತ್ತದೆ)

2 ನ ಹಿ ಜ್ಞಾನೇನ ಸದೃಶಂ (ಜ್ಞಾನಕ್ಕೆ ಸಮಾನವಾದದ್ದು ಯಾವುದೂ ಇಲ್ಲ)

ಮುತ್ತೇಗೆರೆ ಅನಂತು

# ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಸ್ವಲ್ಪವೇ ಸಂಪದವನ್ನು ನೀಡಿರಿ ದೈವಿಕ ಫಲವನ್ನು ಪಡೆಯಿರಿ"

ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಯಾದ ತಿರುಮಲೆ ಕಲಿಯುಗ ವೈಕುಂಠವಾಗಿದ್ದು ದಿನವೂ ಸಹಸ್ರಾರು ಮಂದಿ ಯಾತ್ರಿಕರು ಸ್ವಾಮಿ ದರ್ಶನಕ್ಕಾಗಿ ಆಗಮಿಸುತ್ತಾರೆ ದಿನದಿನವೂ ಹೆಚ್ಚುತ್ತಿರುವ ಯಾತ್ರಿಕ ಸಂದಣಿಯ ವಸತಿ ಸೌಲಭ್ಯಗಳ ಏರ್ಪಾಡಿಗಾಗಿ ತಿ ತಿ ದೇ ಗಳು ಸುಸಜ್ಜಿತ ಅತಿಥಿಗೃಹಗಳನ್ನೂ ಈಗಿರುವ ಕಾಟೇಜುಗಳ ಮೇಲೆ ಮೊದಲ ಅಂತಸ್ತು ಕೊಠಡಿಗಳನ್ನೂ ಸಪ್ತಗಿರಿ ಸತ್ರಗಳ ಕೋಣೆಗಳನ್ನೂ ದಾನಯೋಜನೆಯಲ್ಲಿ ನಿರ್ಮಿಸುತ್ತಿದೆ ತಿರುಮಲೆಯಲ್ಲಿ ವರ್ಷಪೂರ್ತಿ ಸೇರುವ ಯಾತ್ರಿಕ ಸಂದೋಹದ ಸೇವೆಯಲ್ಲಿ ಪಾಲುಗೊಳ್ಳಲು ಭಕ್ತದಾನಿಗಳಿಗೆ ಇದೊಂದು ಸದವಕಾಶ

## ೧ ಮೊದಲ ಅಂತಸ್ತು

ತಿರುಮಲೆಯ ಆಳ್ವಾರ್ ಟ್ಯಾಂಕ್ ಮಂಗಳಭಾವಿ ಶಂಕುಮಿಟ್ಟ ಶೇಷಾದ್ರಿನಗರ, ಅಂಜನಾದ್ರಿನಗರ ಗರುಡಾದ್ರಿನಗರ ಕಾಟೇಜುಗಳಲ್ಲಿ (ಸಿ ಹಾಗೂ ಡಿ ಭಾಗಗಳು) (ನೆಲ ಅಂತಸ್ತಿನಲ್ಲಿರುವ ಎ ಹಾಗೂ ಬಿ ಭಾಗಗಳ ಮೇಲೆ) ೨೦೦ ಮೊದಲ ಅಂತಸ್ತು ಕಾಟೇಜುಗಳನ್ನು ನಿರ್ಮಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದ್ದು ಎ ಟಿ ಸಿ ಎಂ ಬಿ ಸಿ ಎಸ್ ಎಂ ಸಿ ಎಸ್ ಎನ್ ಸಿ ಗಳಲ್ಲಿ ನೂರು ಕಾಟೇಜುಗಳ ಮೊದಲ ಅಂತಸ್ತು ನಿರ್ಮಾಣ ಪೂರ್ತಿಯಾಗಿ ದಾನಿಗಳಿಗೆ ನೀಡಲಾಗಿದೆ ಎ ಎನ್ ಸಿ ಜಿ ಎನ್ ಸಿ ಗಳಲ್ಲಿನ ನೂರು ಮೊದಲ ಅಂತಸ್ತು ಕಾಟೇಜುಗಳು ನಿರ್ಮಾಣ ಪೂರ್ಣಗೊಳ್ಳುವ ಹಂತದಲ್ಲಿವೆ ಇವು ತಿರುಮಲೆಯ ಟಿ ಬಿ ಶಂಕು ಚಕ್ರ ನಾಮಗಳ ಬಳಿಯಿವೆ ನೆಲ ಅಂತಸ್ತಿನ ಎ ಹಾಗೂ ಬಿ ಕಾಟೇಜುಗಳ ಮೇಲೆ ಸಿ ಹಾಗೂ ಡಿ ಭಾಗಗಳ ಕಾಟೇಜುಗಳು ಪ್ರತಿಯೊಂದೂ ಎರಡು ಕೋಣೆಗಳನ್ನು ಹೊಂದಿ (೯೭ ಚದರಡಿ ಹಾಗೂ ೧೦೧೨ ಚದರಡಿ) ಸ್ನಾನ ಶೌಚಗೃಹಗಳನ್ನೊಳಗೊಂಡಿರುತ್ತವೆ

ರೂ ೧೫ ಲಕ್ಷ ರೂಗಳನ್ನು ನೀಡುವುದರಿಂದ ದಾನಿಯು ಒಂದು ಮೊದಲ ಅಂತಸ್ತಿನ ಕಾಟೇಜುಗಳನ್ನು ತಮ್ಮ (ತಮ್ಮ ಸಂಸ್ಥೆ, ಟ್ರಸ್ಟ್ ಕಂಪನಿ) ಹೆಸರಿನಲ್ಲಿ ದಾನ ಮಾಡಬಹುದು

## ೨ ರಾಮಬಗೀಚ ಅತಿಥಿ ಗೃಹಗಳು

ಪ್ರತಿಯೊಂದು ಅಂತಸ್ತಿನಲ್ಲೂ ೫೦ ಸೂಟ್‌ಗಳಂತೆ ಮೂರು ಅಂತಸ್ತುಗಳಲ್ಲಿ ಒಟ್ಟು ೧೫೦ ಸೂಟ್‌ಗಳಿರುವ ಮೂರು ಅತಿಥಿಗೃಹಗಳನ್ನು ನಿರ್ಮಿಸಲು ಯೋಜಿಸಲಾಗಿದ್ದು ಅತಿಥಿಗೃಹ ೧ರಲ್ಲಿ ೧೦೮ ಸೂಟ್‌ಗಳನ್ನು ನಿರ್ಮಿಸಿ ದಾನಿಗಳಿಗೆ ನೀಡಲಾಗಿದೆ ಅತಿಥಿಗೃಹ ೨ರಲ್ಲಿ ೧೫೦ ಸೂಟ್‌ಗಳನ್ನು ನಿರ್ಮಿಸಿ ೫೮ ಸೂಟ್‌ಗಳನ್ನು ದಾನಿಗಳಿಗೆ ನೀಡಲಾಗಿದೆ ಇಲ್ಲಿನ ಮಿಕ್ಕ ೯೨ ಸೂಟ್‌ಗಳೇ ಅಲ್ಲದೆ ಅತಿಥಿಗೃಹ ೩ರಲ್ಲಿನ ೧೫೦ ಸೂಟ್‌ಗಳು ನಿರ್ಮಾಣದ ಕೊನೆಯ ಹಂತದಲ್ಲಿವೆ

ಈ ಮೂರು ಅತಿಥಿಗೃಹಗಳು ದೇವಾಲಯದ ಎದುರಿಗೆ ಅರ್ಧ ಫರ್ಲಾಂಗ್ ದೂರದಲ್ಲಿ ಬೇಡಿ ಆಂಜನೇಯಸ್ವಾಮಿ ದೇವಾಲಯದ ಹಿಂಭಾಗದಲ್ಲಿ ನೂತನ ಆಸ್ಥಾನ ಮಂಟಪದ ಪಕ್ಕದಲ್ಲಿವೆ ಪ್ರತಿ ಸೂಟ್‌ನ ಪ್ಲಿಂತ್ ಏರಿಯಾ ೪೪೫ ಚದರಮೀಟರ್ ಆಗಿದ್ದು (ಸ್ನಾನ ಶೌಚ ಗೃಹಗಳೊಡನೆ) ಸಾಮಾನ್ಯ ಅಂಗಳವಿದೆ

ರೂ ೬೦,೦೦೦ ಮೊತ್ತದ ದಾನದಿಂದ ಒಂದು ಸೂಟ್ ಅನ್ನು ದಾನಿಗಳು ತಮ್ಮ ತಮ್ಮ ಹೆಸರಿನಲ್ಲಿ ನೀಡಬಹುದು

## ೩ ಸಪ್ತಗಿರಿ ಸತ್ರಗಳು

ಒಂದು ಕೇಂದ್ರ ವಿಭಾಗದ ಸುತ್ತ ೯ ವಿಭಾಗಗಳಿರುವಂತಹ ಒಂದು ಮಹತ್ ಯೋಜನೆಯನ್ನು ತಿ ತಿ ದೇ ಆರಂಭಿಸಿದೆ ೧ ಹಾಗೂ ೯ ನೇ ವಿಭಾಗಗಳು ಪ್ರವೇಶ ಹಾಗೂ ಉಪಹಾರಗೃಹಗಳಿಗಾಗಿ ಕೇಂದ್ರ ವಿಭಾಗವು ಅಷ್ಟ ಮುಖಗಳ ಅಂಗಳವನ್ನು ಹೊಂದಿದ್ದು ಎಂಟು ಮುಖಗಳಲ್ಲೂ ಒಂದೊಂದು ವಿಭಾಗ ನಿರ್ಮಾಣವಾಗುವುದು ಯಾವುದೇ ವಿಭಾಗಕ್ಕೂ ೧ನೇ ವಿಭಾಗದಿಂದ ಪ್ರವೇಶ ಮಿಕ್ಕ ವಿಭಾಗಗಳು ೨ ರಿಂದ ೮ (ಒಟ್ಟು ೭ ವಿಭಾಗ) ೯೫೪ ಕೋಣೆಗಳನ್ನು ಹೊಂದಿದ್ದು ೧೧ ಕೋಣೆಗಳು ಆಡಳಿತ ನಿರ್ವಹಣೆಗಾಗಿದ್ದು ಮಿಕ್ಕ ೯೪೩ ಕೋಣೆಗಳನ್ನು ಯಾತ್ರಿಕರಿಗೆ ನೀಡಲಾಗುವುದು ಮೊದಲ ಹಂತದಲ್ಲಿ ೨ ಹಾಗೂ ೩ನೇ ವಿಭಾಗಗಳ (೧೦೮+೧೪೯) ೨೫೭ ಕೋಣೆಗಳ ನಿರ್ಮಾಣವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸುವ ಹಂತದಲ್ಲಿದೆ ಪ್ರತಿ ಕೋಣೆಯ ವಿಸ್ತೀರ್ಣ (ಸ್ನಾನ ಶೌಚಗಳೊಂದಿಗೆ)೧೨+೧೪ ರೂ ೪೦,೦೦೦ ಗಳ ದಾನದಿಂದ ದಾನಿಯು ತಮ್ಮ ಹೆಸರಿನಲ್ಲಿ ಕೋಣೆಯನ್ನು ನೀಡಬಹುದು ಈ ವರೆಗೆ ೮೦ ಕೋಣೆಗಳಿಗಾಗಿ ಆಂಶಿಕ ಹಾಗೂ ಪೂರ್ಣ ದಾನಗಳನ್ನು ಸ್ವೀಕರಿಸಲಾಗಿದೆ ಎರಡನೇ ವಿಭಾಗದ ಶೀಘ್ರ ಪೂರ್ಣತೆಯ ಬಳಿಕ ಅದನ್ನು ನೀಡಲಾಗುವುದು

## ೪ ಶೇಷಾದ್ರಿನಗರ ಅತಿಥಿಗೃಹ2

- ಎರಡಂತಸ್ತಿನ ಈ ಅತಿಥಿಗೃಹದಲ್ಲಿ ೨೬ ಸೂಟ್‌ಗಳಿದ್ದು (ಪ್ರತಿ ಅಂತಸ್ತಿಗೆ ೧೩ ಸೂಟ್‌ಗಳು) ಯಾತ್ರಿಕರಿಗೆ ಬಾಡಿಗೆಯ ಮೇಲೆ ನೀಡಲಾಗುತ್ತದೆ ಪ್ರತಿ ಸೂಟ್ ೪೨m x ೪೨m ಇರುತ್ತದೆ

ಇಡೀ ಅತಿಥಿಗೃಹಕ್ಕಾಗಿ ಅಥವಾ ಪ್ರತಿ ಅಂತಸ್ತಿಗಾಗಿ ದಾನಗಳಿಗೆ ಆದ್ಯತೆ ನೀಡಲಾಗುವುದು

೨೫ ಲಕ್ಷ ರೂಗಳ ದಾನದಿಂದ ವ್ಯಕ್ತಿ ವ್ಯಕ್ತಿಗಳು ಸಂಸ್ಥೆ, ಕಂಪನಿ ಟ್ರಸ್ಟ್, ಇಡೀ ಅತಿಥಿಗೃಹದ ದಾನಿಗಳಾಗಲು ಸಾಧ್ಯ

ದಾನಿಗಳಿಗೆ ಸೌಲಭ್ಯಗಳು ದಾನಿಗಳು ತಮ್ಮ ಜೀವನಾವಧಿಯಲ್ಲೂ ಕಂಪನಿ, ಇತ್ಯಾದಿಗಳು ೧೫ ವರ್ಷಗಳೂ ವರ್ಷಕ್ಕೆ ೬೦ ದಿನ (ಒಮ್ಮೆ ೧೦ ದಿನಗಳಿಗೆ ಮೀರದಂತೆ) ತಮ್ಮ ದಾನದ ಕಾಟೇಜು ಸೂಟು ಕೋಣೆಗಳಲ್ಲಿ ನಾಮಮಾತ್ರಸೇವಾ ಶುಲ್ಕದಿಂದ ಇರಬಹುದು ದಾನಿಗಳ ಹೆಸರು ವಿಳಾಸಗಳನ್ನು ಶಿಲಾಫಲಕದಲ್ಲಿ ಕೆತ್ತಿಸಿ ದಾನದ ಕೊಠಡಿ ಸೂಟ್‌ಗಳಲ್ಲಿ ಪ್ರದರ್ಶಿಸಲಾಗುವುದು

ಮಿಕ್ಕವಿವರಗಳಿಗಾಗಿ ಕೂಡಲೇ ಬರೆಯಿರಿ **ಕಾರ್ಯನಿರ್ವಹಣಾಧಿಕಾರಿ**, ತಿ ತಿ ದೇ ತಿರುಪತಿ

******

3 ಸಂಶಯಾತ್ಮಾ ವಿನಶ್ಯತಿ (ಸಂಶಯದಿಂದ ಶ್ರದ್ಧೆ ನಶಿಸುತ್ತದೆ)

4 ಶ್ರದ್ಧಾ ಹಿ ಪರಮಾಗತಿ (ಶ್ರದ್ಧೆಯೇ ಪರಮವಾದ ಗತಿ)

ಆದುದರಿಂದ ಶ್ರದ್ಧೆಯೇ ಪ್ರತಿಯೊಂದು ಧರ್ಮಕ್ಕೂ ಮೂಲ ಅಂದರೆ ಪ್ರತಿಯೊಂದು ಧರ್ಮವೂ ಮೊದಲು ದೇವರಲ್ಲಿ ನಂಬಿಕೆಯಿರಿಸಿ ಮುಂದುವರಿಯುವಂತೆ ಹೇಳುತ್ತದೆ ಮೊದಲೇ ನಂಹಿಕೆಯಿರಬೇಕೆಂದರೆ ಹೇಗೆ ಸಾಧ್ಯ ? ಶ್ರದ್ಧೆಯನ್ನು ಹೊರಗಿನಿಂದ ತುರುಕಲು ಸಾಧ್ಯವೇ? ಯಾರಿಗೇ ಆಗಲಿ ಸ್ವಂತ ಅನುಭವವಾದ ಹೊರತು ನಿಜವಾದ ಶ್ರದ್ಧೆಯುಂಟಾಗಲು ಸಾಧ್ಯವಿಲ್ಲ ಮಹಾಪುರುಷರು ಸ್ವಧರ್ಮಕ್ಕನುಗುಣವಾದ ಕಾರ್ಯದಲ್ಲಿ ಮಗ್ನರಾಗುವರು ಅಂತರಿಕವಾದ ಶ್ರದ್ಧೆಯನ್ನು ಅನುಸರಿಸಿ ಬಾಳಿನಲ್ಲಿ ಕೆಲಸವನ್ನು ಮಾಡಬೇಕು ಕೇವಲ ಅಧಿಕಾರ ಹಣಕ್ಕಾಗಿ ಯತ್ನಿಸುವುದರಿಂದ ಲೋಕಕ್ಕಾಗಲೀ ವ್ಯಕ್ತಿಗಾಗಲೀ ಪ್ರಯೋಜನವಾಗುವುದಿಲ್ಲ ಇಲ್ಲಿ ದೃಷ್ಟಾಂತವೊಂದನ್ನು ಅವಲೋಕಿಸಬಹುದು ಸ್ವಾಮಿ ರಾಮತೀರ್ಥರು ಕಡುಬಡತನದಲ್ಲಿ ಬೆಳೆದು ವಿದ್ಯಾಭ್ಯಾಸ ಮಾಡಿದರು ಊಟವನ್ನಾದರೂ ಬಿಟ್ಟು ಅದರಿಂದ ಮಿಗುತ್ತಿದ್ದ ಹಣದಿಂದ ದೀಪದ ಎಣ್ಣೆಯನ್ನು ಕೊಂಡು ಹೆಚ್ಚಾಗಿ ಓದುವ ಶ್ರದ್ಧೆ ಅವರದಾಗಿತ್ತು ತಾಳ್ಮೆಯಿಂದ ಸಹಿಸಿ ಕಷ್ಟಪಟ್ಟು ಓದಿ ಮೇಧಾವಿಗಳಾದರು ಇವರ ಬುದ್ಧಿಶಕ್ತಿಯನ್ನು ವ್ಯಾಸಂಗದಲ್ಲಿದ್ದ ಶ್ರದ್ಧೆಯನ್ನು ಕಂಡು ಕಾಲೇಜಿನ ಮುಖ್ಯಾಧಿಕಾರಿಗಳು ಇವರ ಹೆಸರನ್ನು ಸಿವಿಲ್ ಸರ್ವಿಸ್ ಪರೀಕ್ಷೆಗೆ ಶಿಫಾರಸ್ಸು ಮಾಡಬೇಕೆಂದು ಬಯಸಿದರು ಅದನ್ನು ತಿಳಿದ ರಾಮತೀರ್ಥರು "ಹೀಗೆ ಮಾಡಬೇಡಿ ಅಧಿಕಾರಿಯಾಗಿ ಹಣ ಸಂಪಾದನೆಯೇ ನನ್ನ ಆದರ್ಶವಲ್ಲ ಅಧ್ಯಾಪಕನಾಗಿ ನಾನು ಕಲಿತ ವಿದ್ಯೆಯನ್ನು ನೂರಾರು ಜನರಿಗೆ ಹಂಚಬೇಕೆಂದು ಸಂಕಲ್ಪ ಮಾಡಿದ್ದೇನೆ" ಎಂದು ವಿನಯದಿಂದ ಹೇಳಿದರು

ಶ್ರದ್ಧೆಯ ಮಹತ್ವವನ್ನು ಈ ಕೆಳಗಿನ ಕೀರ್ತನೆಯಲ್ಲಿ ಕಾಣಬಹುದು

ಶ್ರದ್ಧೆಯ ಸರೋವರದಿ ತಾಯ  
ನಾಮದ ನೌಕೆ ತೇಲುತಿದೆ ನೋಡು  
ಗುರು ಕರುಣೆಯಲ್ಲಿ ಕಲಿತ ಸಾಧನಾದಿಗಳಿಂದ  
ಭವ ಜಲಧಿ ಪಾರವನು ಸೇರಬಹುದು  
ಮೃತ್ಯುಂಜಯನೆ ತಾನು ಹುಟ್ಟು  
ಹಾಕುತಿರಲು ಬಿರುಗಾಳಿಯಲಿ ನೌಕೆ  
ಮುಳುಗಿ ಹೋಗುವುದೆಂಬ ಭಯವೇಕೆ ನಿನಗೆ  
ಶ್ರದ್ಧೆ ಎಲ್ಲಿರುವುದೋ ಅಲ್ಲಿ  
ದೊರೆಯುವೆ ನಾನು  
ನನಗಾಗಿ ಹುಡುಕಿದರೆ ದೊರೆವೆ ನಾನು  
(ಶ್ರೀ ರಾಮಕೃಷ್ಣ ವಚನ ವೇದದಿಂದ)

ಧರ್ಮ ಭಾರತೀಯರ ಸರ್ವಸ್ವ ಇದು ಜೀವನದ ಶ್ರದ್ಧಾಕೇಂದ್ರ ಪ್ರತಿಯೊಬ್ಬರನ್ನೂ ಕುಬೇರನನ್ನಾಗಿ ಮಾಡಿದರೂ, ಸಾಮಾಜಿಕ ಸುಧಾರಣೆಗಳನ್ನು ಕೈಗೊಂಡರೂ- ಧರ್ಮ ಶ್ರದ್ಧೆಯಿಲ್ಲದೇ ಭಾರತ ಉಳಿಯದು ಇಂದು ಎಲ್ಲಾ ಅಪಾಯಕ್ಕೂ ಧರ್ಮಶ್ರದ್ಧೆಯ ಅಭಾವನೇ ಕಾರಣ ಚಿಂತನಶೀಲನು ಅನುಭವದಿಂದ ವಿಶ್ಲೇಷಿಸಿ ಪರೀಕ್ಷಿಸಿ ಕೊನೆಗೊಂದು ತೀರ್ಮಾನಕ್ಕೆ ಬಂದಿದ್ದಾರೆ ಏನೆಂದರೆ ಯಾವುದಾದರೊಂದು ಧರ್ಮದಲ್ಲಿ ಸಂಪೂರ್ಣ ಶ್ರದ್ಧೆಯುಂಟಾದಾಗ ಮಾತ್ರವೇ ಮಾನವನಿಗೆ ನಿಜವಾದ ಸುಖ ಹಾಗೂ ವಿಮುಕ್ತಿ ಸಾಧ್ಯ ಶ್ರೀ ರಾಮಕೃಷ್ಣರ ದೃಷ್ಟಾಂತ ಕಥೆಗಳಲ್ಲಿ ಶ್ರದ್ಧೆಗೊಂದು ಉದಾಹರಣೆ ಅದ್ಭುತವಾಗಿದೆ ದೈವಭಕ್ತ ನೇಕಾರನಿದ್ದ ಆತ ಸರಕನ್ನು ಸಂತೆಯಲ್ಲಿಟ್ಟು ಮಾರುತ್ತಿದ್ದ ಯಾರಾದರೂ ಗಿರಾಕಿಗಳು ಬೆಲೆ ವಿಚಾರಿಸಿದರೆ "ರಾಮನ ಇಚ್ಛೆಯಂತೆ ಬಟ್ಟೆಯ ಬೆಲೆ ಒಂದು ರೂಪಾಯಿ" ಎಂದು ಹೇಳುತ್ತಿದ್ದ ಗಿರಾಕಿಗಳಿಗೆ ವಿಶ್ವಾಸವಿದ್ದುದರಿಂದ ಹೇಳಿದ ಬೆಲೆ ಕೊಟ್ಟು ಬಟ್ಟೆ ಕೊಳ್ಳುತ್ತಿದ್ದರು ಪ್ರತಿದಿನ ನೇಕಾರ ರಾತ್ರಿ ಹೊತ್ತು ದೇವರಗುಡಿಯಲ್ಲಿ ಕುಳಿತು ದೇವರ ಧ್ಯಾನ ಮಾಡುತ್ತಾ, ಹಾಡುತ್ತಾ ಹೊತ್ತು ಕಳೆಯುತ್ತಿದ್ದ ಒಂದು ದಿನ ಎಷ್ಟು ಹೊತ್ತಾದರೂ ನಿದ್ರೆ ಬರಲಿಲ್ಲ ಆಗ ಕಳ್ಳರ ಗುಂಪೊಂದು ಇವನನ್ನು ಎಬ್ಬಿಸಿ ಎಳೆದುಕೊಂಡು ಹೋಗಿ ಕಳುವು ಮಾಡಿದ ಸಾಮಾನುಗಳನ್ನು ಇವರ ತಲೆಯ ಮೇಲೆ ಹೊರಿಸಿಕೊಂಡು ಹೋಗುತ್ತಿದ್ದರು ಜನರು ಎಚ್ಚರಗೊಂಡು ಅಟ್ಟಿಸಿಕೊಂಡು ಬಂದಾಗ ಕಳ್ಳರು ತಪ್ಪಿಸಿಕೊಂಡರು, ಆದರೆ ನೇಕಾರ ಸಿಕ್ಕಿ ಬಿದ್ದ ಕೊನೆಗೆ ಕೋರ್ಟಿನಲ್ಲಿ ನ್ಯಾಯಾಧೀಶರು ನೇಕಾರನ ಹೇಳಿಕೆ ಕೇಳಿದಾಗ ಆಗ ಆತ "ಪ್ರಭುಗಳೆ, ರಾಮನ ಇಚ್ಛೆ



ಯಂತೆ ನಾನು ಊಟಮುಗಿಸಿದೆ, ರಾಮನ ಇಚ್ಛೆಯಂತೆ ದೇವರಗುಡಿಯಲ್ಲಿ ಕುಳಿತಿದ್ದೆ ನಿದ್ರೆ ಬಂದಿರಲಿಲ್ಲ ಆಗ ರಾಮನ ಇಚ್ಛೆಯಂತೆ ಕಳ್ಳರ ಗುಂಪು ಅಲ್ಲಿಗೆ ಬಂತು ರಾಮನ ಇಚ್ಛೆಯಂತೆ ಅವರು ನನ್ನನ್ನು ಎಳೆದುಕೊಂಡು ಹೋಗಿ ಮೂಟೆ ಹೊರಿಸಿದರು ರಾಮನ ಇಚ್ಛೆಯಂತೆ ನಾನು ಸಿಕ್ಕಿಬಿದ್ದೆ ರಾಮನ ಇಚ್ಛೆಯಂತೆ ನನ್ನನ್ನು ತಮ್ಮ ಮುಂದೆ ಹಾಜರ್ ಪಡಿಸಿದ್ದಾರೆ ಎಂದ ನಂತರ ನ್ಯಾಯಾಧೀಶರು ನೇಕಾರನ ಪ್ರಾಮಾಣಿಕತನವನ್ನೂ ಶ್ರದ್ಧೆಯನ್ನೂ ಗಮನಿಸಿ ಬಿಡುಗಡೆ ಮಾಡಿದರು ನೇಕಾರ ತನ್ನ ಮನೆಗೆ ಬರುವಾಗ ಅವನ ಬಂಧುಗಳು ಹೇಗೆ ನಿನ್ನನ್ನು ಬಿಡುಗಡೆ ಮಾಡಿದರು" ಎಂದು ಕೇಳಿದಾಗ ರಾಮನ ಇಚ್ಛೆಯಂತೆ ನನ್ನನ್ನು ಬಿಡುಗಡೆ ಮಾಡಿದರು" ಎಂದ

ಪಾತ್ರಾಪಾತ್ರ ಅರಿತು ವಿಚಾರ-ವಿವೇಕ ವಿನಿಮಯ ಮಾಡಿಕೊಳ್ಳಬೇಕು ಆಗಲೇ ಜ್ಞಾನ ವಿಕಾಸವಾಗಿ ಸಂಸ್ಕಾರವಾಗುವುದು ಮತ್ತು ಅಂಥ ಶ್ರದ್ಧೆಯಿಂದ ದೂರವಿರಬಹುದು ಇಲ್ಲಿ ಭಾಗವತದಿಂದ ಶ್ಲೋಕವೊಂದನ್ನು ಉಲ್ಲೇಖಿಸಬಹುದು

ಶ್ರದ್ಧಧಾನಾಯ ಭಕ್ತಾಯ
ವಿನೀತಾಯಾನ ಸೂಯವೇ
ಭೂತೇಷು ಕೃತ ಮೈತ್ರಾಯ
ಶುಶ್ರೂಷಾಭಿರತಾಯ ಚ||

(ಶ್ರದ್ಧೆಯಿಂದ ಕೂಡಿರುವವನಿಗೆ, ಭಕ್ತನಿಗೆ, ವಿನೀತನಿಗೆ, ಕೇಳುವುದರಲ್ಲಿ ಇಚ್ಛೆಯುಳ್ಳವನಿಗೆ ಜ್ಞಾನಾಮೃತದ ಉಪದೇಶವನ್ನು ನೀಡಬೇಕು)

ಶ್ರದ್ಧೆಯಿಂದಲೇ ಧರ್ಮ ಬೆಳಗುತ್ತದೆ ಬೇಕಾದಷ್ಟು ಧನವಿದ್ದರೂ ಧರ್ಮವನ್ನು ಸಂಪಾದಿಸಲಾರರು ಆದರೆ ಶ್ರೀಮಂತರಲ್ಲದ ಋಷಿಗಳು ಸಂತರು ದಾಸರು ಶರಣರು ಶ್ರದ್ಧೆಯಿಂದ ಸದ್ಗತಿ ಪಡೆದಿದ್ದಾರೆ ಇದೇ ವಿಚಾರವನ್ನು ಗರುಡ ಪುರಾಣ ಹೀಗೆ ಉಲ್ಲೇಖಿಸಿದೆ

"ಶ್ರದ್ಧಯಾ ಧಾರ್ಯತೇ ಧರ್ಮೋ
ಬಹುಭಿರ್ನಾರ್ಥ ರಾಶಿಭಿ
ನಿಷ್ಕಿಂಚನಾಹಿ ಮುನಯ
ಶ್ರದ್ಧಾವಂತೋ ದಿವಂಗತಾ

ಶ್ರದ್ಧೆ ಜೀವನದ ಒಂದು ಮುಖ್ಯ ಅವಶ್ಯಕತೆ ಶ್ರದ್ಧೆ ಒಂದು ಆತ್ಮಗುರು ಮನಸ್ಸಿನ ಮಹಾಶಕ್ತಿ, ಅದರ ಬಳಕೆಯನ್ನು ಎಲ್ಲರೂ ಎಲ್ಲಾ ಕಾಲದಲ್ಲೂ ಪಡೆಯಬಹುದು ನಮ್ಮ ಆನಂದ, ಆಯಸ್ಸು, ಆರೋಗ್ಯ, ಉದ್ಯಮ ಎಲ್ಲವೂ ಶ್ರದ್ಧೆಯ ಸತ್ಪರಿಣಾಮ ಜಗತ್ತಿನ ಎಲ್ಲಾ ರಹಸ್ಯದ ಬಾಗಿಲುಗಳನ್ನು ತೆರೆಯುವ ಕೀಲಿಕೈ ಶ್ರದ್ಧೆ ಎಲ್ಲಾ ಶಕ್ತಿಗಳೂ ಹೊರ ಹೊಮ್ಮುವ ಮೂಲ ಸ್ರೋತ್ರವಾದ ಪರಮಾರ್ಥಕ್ಕೂ ಅದು ಪರಿಪೂರ್ಣವಾದ ಮಾರ್ಗ

ಆತ್ಮ ಶ್ರದ್ಧೆಯ ಅಭಾವ ನಮ್ಮನ್ನು ಅಧಃಪತನದೆಡೆಗೆ ಕೊಂಡೊಯ್ಯುತ್ತದೆ ನಮ್ಮಲ್ಲಿ ಪ್ರತಿಯೊಬ್ಬರಲ್ಲೂ ಅಪಾರಶಕ್ತಿ ಅಡಗಿದೆ ಈ ಶಕ್ತಿಯ ಚೇತನ ಚಿಲುಮೆಯನ್ನು ಚಿಮ್ಮಿಸಿ ಮಹತ್ಕಾರ್ಯವನ್ನು ಸಾಧಿಸಬೇಕು ನಮ್ಮಲ್ಲಿರುವ ಅಪಾರ ಶಕ್ತಿಯನ್ನು ನಾವು ಮನಗಂಡಾಗಲೇ ಆತ್ಮಮತಿ ಗೋಚರಿಸುವುದು ಬದುಕಿಕೊಂಡು ಬೆಳಕು ತೋರುವುದು

ನಮ್ಮ ಶ್ರದ್ಧೆಯ ಸತ್ವದಲ್ಲಿ ಜೀವನ ನಡೆಸಿದರೆ, ಅದೇ ನಮಗೆ ಶ್ರೀರಕ್ಷೆ ಎನ್ನುತ್ತಾರೆ ಡಾ|| ಡಿ ವಿ ಗುಂಡಪ್ಪನವರು

ನೆಚ್ಚದಿರು ದೈವವನು ಬೆಚ್ಚದಿರದಾರಿಗಂ
ಎಚ್ಚರಿರು ನಿನ್ನ ಸತ್ವದಲ್ಲಿ ನೀಂ ನಿಂತು
ಅಚ್ಚು ಮೆಚ್ಚೇನಾದರಿರಲಿ ಲೋಕಕ್ಕೇ ಬಿಡು
ರಚ್ಚೆ ನೀನೇ ನಿನಗೆ – ಮರುಳ ಮುನಿಯ ||

*

# ವಾರ್ತಾಲಹರಿ

## ಜನವರಿ 1 ರಂದು ಯಾತ್ರಿಕರ ಹೆಚ್ಚಳ

ಹೊಸ ವರ್ಷದ ದಿನದಂದು ತಿರುಮಲೆಯಲ್ಲಿ ಯಾತ್ರಿಕರ ಸಂದಣಿ ಹೆಚ್ಚಾಗಿದ್ದಿತು ಅಂದು ಬೆಳಗ್ಗೆ (ಬುಧವಾರ) 3 ಗಂಟೆಗೆ ಆರಂಭವಾದ ಸ್ವಾಮಿಯ ಸರ್ವದರ್ಶನದಲ್ಲಿ ಸಂಜೆ ಆರರವರೆಗೆ 65 ಸಾವಿರಕ್ಕೂ ಹೆಚ್ಚಿನ ಜನ ಸ್ವಾಮಿಯನ್ನು ದರ್ಶಿಸಿದರು ಸರ್ವದರ್ಶನದಲ್ಲಿ ವೈಕುಂಠಂ ಸರದಿಯ ಸಾಲಿನಿಂದ 38 ಸಾವಿರ ಮಂದಿಯೂ 25 ರೂಗಳ ಪ್ರತ್ಯೇಕ ಪ್ರವೇಶದ್ವಾರದ ಮೂಲಕ 25 ಸಾವಿರ ಮಂದಿಯೂ ಸ್ವಾಮಿ ದರ್ಶನವನ್ನು ಪಡೆದರು

ಅಂದು ಸಂಜೆಯ ವರಕಾಮಣಿಯವರೆಗೆ ಹುಂಡಿಯ ಮೂಲಕ 24 ಲಕ್ಷ 91 ಸಾವಿರದ ಐದುನೂರು ರೂಗಳ ಆದಾಯ ಕಂಡು ಬಂದಿತು (ನಂತರವೂ ಲೆಕ್ಕ ನಡೆಯುತ್ತಲೇ ಇದ್ದಿತು) ಅಂದು ನಿತ್ಯಾನ್ನದಾನ ಯೋಜನೆಯಲ್ಲಿ 24 ಸಾವಿರ ಮಂದಿ ಭೋಜನ ಮಾಡಿದರು ಹದಿನೆಂಟು ಹೊಸ ಲಾಡು ಕೌಂಟರುಗಳನ್ನು ಏರ್ಪಾಡು ಮಾಡಿದ್ದು ಹೆಚ್ಚಿನ ಭಕ್ತರ ಹೆಚ್ಚಿನ ಪ್ರಸಾದ ಕೋರಿಕೆಯನ್ನು ಪೂರೈಸಲಾಯಿತು ಒಬ್ಬೊಬ್ಬರಿಗೆ ಎರಡೆರಡು ಲಾಡು ಮಾತ್ರವೇ ವಿತರಣೆಯಾಗುವ ಪಡಿತರ ಪದ್ಧತಿಯಿಂದಾಗಿ ಎಲ್ಲರಿಗೂ ಲಾಡು ದೊರೆಯಿತು

ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಜೆ ಇ ಓ ಶ್ರೀ ಜನಾರ್ದನನಾಯುಡು ಮತ್ತಿತರ ಸಂದಣಿಯ ಸ್ಥಳಗಳಲ್ಲಿ ನಿಂತು ಯಾತ್ರಿಕರಿಗೆ ಯಾವುದೇ ರೀತಿಯ ತೊಂದರೆಯೂ ಆಗದಂತೆ ಮೇಲು ವಿಚಾರಣೆ ನಡೆಸಿದರು

ಅಂದು ಬೆಳಗ್ಗೆ ನೂರಾರು ಮಂದಿ ಭಕ್ತರು ದೇವಾಲಯದ ನಾಲ್ಕು ತಿರುವೀಧಿಗಳಲ್ಲಿ ಉರುಳು ಸೇವೆಯನ್ನು ಸಲ್ಲಿಸಿದರು

## ಸ್ವಾಮಿಗೆ ಹೊಸ ಆರ್ಜಿತಸೇವೆ

ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿ ಆಲಯದಲ್ಲಿ ಶ್ರೀ ಪದ್ಮಾವತೀ ಪರಿಣಯ ಉತ್ಸವ ಎನ್ನುವ ಆರ್ಜಿತ ಸೇವೆಯನ್ನು ಪ್ರವೇಶಗೊಳಿಸಲಾಗಿದೆ ಪ್ರತಿ ವೈಶಾಖ ಶುದ್ಧ ದಶಮಿ ತರುವಾಯ ಮೂರುದಿನ ನಡೆಯುವ ಈ ಉತ್ಸವದಲ್ಲಿ ಪಾಲುಗೊಳ್ಳ ಬಯಸುವ ಭಕ್ತರು ದಿನವೊಂದಕ್ಕೆ 5 ಸಾವಿರ ರೂ ಶುಲ್ಕ ನೀಡಬೇಕೆಂದೂ ಈ ಸೇವೆ ಮಾಡಿಸಿದ ಗೃಹಸ್ಥರಿಗೆ ಅಮ್ಮನವರ ಹೆಸರಿನಲ್ಲಿ ಒಂದು ಕುಪ್ಪಸದ ಕಣ ಹತ್ತು ಲಾಡು ಹತ್ತು ವಡೆಗಳ ಪ್ರಸಾದಗಳನ್ನು ನೀಡಲಾಗುವುದೆಂದೂ ತಿ ತಿ ದೇ ಪೌರಸಂಬಂಧಾಧಿಕಾರಿ ಡಾ|| ರಾವುಲ ಸೂರ್ಯನಾರಾಯಣ ಮೂರ್ತಿ ಅವರು ತಿಳಿಸಿದ್ದಾರೆ ಈ ಉತ್ಸವ ಸಂದರ್ಭದಲ್ಲಿ ಸ್ವಾಮಿಯ ಉತ್ಸವರು ಶ್ರೀ ಮಲೆಯಪ್ಪಸ್ವಾಮಿಯನ್ನು ಶ್ರೀ ಭೂದೇವಿಯರ ಸಹಿತ ನಾರಾಯಣಾದ್ರಿಯ ಎದುರು ಉದ್ಯಾನವನದಲ್ಲಿ ವಿಹಾರಕ್ಕೆ ಬಿಜಯ ಮಾಡಿಸಲಾಗುವುದು ಅಲ್ಲಿ ಧಾರ್ಮಿಕೋಪನ್ಯಾಸ ನೀಡುವ ಏರ್ಪಾಡು ನಡೆಯುದೆಂದೂ ತಿಳಿಸಿದರು

ಧನುರ್ಮಾಸದ ಕಡೆಯಲ್ಲಿ ಸ್ವಾಮಿ ಆಲಯದಲ್ಲಿ ಗೋದಾಪರಿಣಯವೆಂಬ ಹೊಸ ಸೇವೆಯನ್ನು ಮಾಡಲಾಗುವುದು ಪ್ರತಿವರ್ಷವೂ ಶ್ರೀ ಗೋವಿಂದ ರಾಜಸ್ವಾಮಿ ದೇವಾಲಯದ ಶ್ರೀ ಗೋದಾಸನ್ನಿಧಿಯಿಂದ ಶ್ರೀ ಗೋದಾದೇವಿಗೆ ಅರ್ಪಿಸಿದ ರೇಷ್ಮೆ ವಸ್ತ್ರ ಪುಷ್ಪಹಾರಗಳನ್ನು ವಿಜೃಂಭಣೆಯಿಂದ ಮೆರವಣಿಗೆಯಲ್ಲಿ ತಿರುಮಲೆಗೆ ತೆಗೆದುಕೊಂಡು ಹೋಗಿ ಪುರಾಣೋಕ್ತವಾಗಿ ಸ್ವಾಮಿಗೆ ಒಪ್ಪಿಸಲಾಗುವುದು ಇದರಲ್ಲೂ ಗೃಹಸ್ಥರು 5000 ರೂಗಳ ಶುಲ್ಕ ನೀಡಿ ಆರ್ಜಿತ ಸೇವೆಯನ್ನಾಗಿ ಮಾಡಬಹುದು

## ತಿರುಮಲೆಯಲ್ಲಿ ದೂರುಗಳ ವಿಭಾಗದ ಆರಂಭ

ತಿರುಮಲೆಯ ಯಾತ್ರಿಕರ ಸೌಕರ್ಯಾರ್ಥ ವೈಕುಂಠಂ ಸರದಿಯ ಸಾಲಿನ ಸಮುದಾಯದ ಬಳಿ ದೂರುಗಳ ಸ್ವೀಕರಣ ಕೇಂದ್ರವನ್ನು ತೆರೆಯಲಾಗಿದೆ ಜನವರಿ 22 ರಂದು ಈ ವಿಭಾಗವನ್ನು ಆರಂಭಿಸಿದ ತಿ ತಿ ದೇ ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಟಿ ಸುಬ್ಬುರಾಮಿರೆಡ್ಡಿಯವರು ಮಾತನಾಡುತ್ತ ಯಾತ್ರಿಕರು ನೀಡುವ ಸಲಹೆ ಸೂಚನೆ, ದೂರುಗಳನ್ನು ಸ್ವೀಕರಿಸಿ ಒಟ್ಟುಗೂಡಿಸಿ ಸಾಧ್ಯವಿದ್ದ ಕಡೆಯಲ್ಲೆಲ್ಲ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗುವುದೆಂದು ನುಡಿದರು ಈ ವಿಭಾಗವು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಯವರ ನೇತೃತ್ವದಲ್ಲಿ ಕೆಲಸಮಾಡುತ್ತದೆ

## ಹೊಸ ಉದ್ಯಾನಗಳು ವೃದ್ಧಾಶ್ರಮಗಳು

ತಿರುಮಲೆಯಲ್ಲಿ ಯಾತ್ರೆಗೆ ಬರುವ ಭಕ್ತರ ಮಕ್ಕಳಿಗಾಗಿ ಮಕ್ಕಳ ಮೂರು ಉದ್ಯಾನವನಗಳನ್ನು ನಿರ್ಮಿಸಲು (9 ಲಕ್ಷ ರೂಗಳ ಅಂದಾಜುವೆಚ್ಚದಲ್ಲಿ) ತೀರ್ಮಾನಿಸಲಾಗಿದೆ ತಿ ತಿ ದೇ ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಟಿ ಸುಬ್ಬುರಾಮಿರೆಡ್ಡಿ ಅವರು ಪತ್ರಿಕಾಗೋಷ್ಠಿಯಲ್ಲಿ ಈ ವಿಷಯವನ್ನು ತಿಳಿಸಿದ್ದಾರೆ

ತಿರುಪತಿಯಲ್ಲಿ ಎರಡು ವೃದ್ಧಾಶ್ರಮಗಳನ್ನು - ಒಂದು ಶುಲ್ಕ ಸಹಿತ ಮತ್ತೊಂದು ಉಚಿತ - ಸ್ಥಾಪಿಸಲೂ ಧರ್ಮಕರ್ತರ ಮಂಡಳಿ ತೀರ್ಮಾನಿಸಿದೆ

ಅನಾಥ ಹಾಗೂ ಬೀದಿ ಮಕ್ಕಳ ಸಲುವಾಗಿ ಒಂದು ಗೃಹವನ್ನೂ ಏರ್ಪಾಡು ಮಾಡಲಾಗುವುದು ಮೊದಲಿಗೆ ಈ ಮೂರು ಗೃಹಗಳನ್ನೂ ಬಾಡಿಗೆಯ ಮನೆಗಳಲ್ಲಿ ಏರ್ಪಾಡು ಮಾಡಿ ನಂತರ ಶೀಘ್ರದಲ್ಲಿಯೇ ಎಂದರೆ ಆರು ತಿಂಗಳಲ್ಲಿ ಸ್ವಂತ ಮನೆಗಳಿಗೆ ತೆರಳಿಸಲಾಗುವುದು ಎಂದು ಅಧ್ಯಕ್ಷರು ತಿಳಿಸಿದ್ದಾರೆ

## ವೈಭವದ ಪಾರ್ವೇಟಿ ಉತ್ಸವ

ಪ್ರತಿವರ್ಷವೂ ಸಂಕ್ರಾಂತಿಯ ಮರುದಿನ ತಿರುಮಲೆಯಲ್ಲಿ ನಡೆಸಲಾಗುವ ಪಾರುವೇಟಿ ಉತ್ಸವ ಈ ವರ್ಷ ಜನವರಿ 16 ರಂದು ಮಧ್ಯಾಹ್ನ ವೈಭವದಿಂದ ನಡೆಯಿತು ಪ್ರತಿವರ್ಷವೂ ತಿರುಮಲೆಯ ದೇವಾಲಯದಿಂದ ಶ್ರೀಮಲಯಪ್ಪಸ್ವಾಮಿಯನ್ನು ಬೇಟೆಗಾಗಿ ಪಾಪನಾಶನಂ ದಾರಿಯಲ್ಲಿನ ಪಾರುವೇಟಿ ಮಂಟಪದ ವರೆಗೆ ಉತ್ಸವದಲ್ಲಿ ಬಿಜ ಮಾಡಿಸಲಾಗುವುದು ಗುರುವಾರದಂದು ಸರ್ವಲಾಂಛನಗಳೊಡನೆ ಸ್ವಾಮಿಯನ್ನು ಪಾರ್ವೇಟಿ ಮಂಟಪಕ್ಕೆ ಕರೆತರಲಾಯಿತು

ಪಾರ್ವೇಟಿ ಉತ್ಸವದಲ್ಲಿ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಮತ್ತಿತರ ಅಧಿಕಾರಿಗಳು ಪಾಲುಗೊಂಡಿದ್ದರು

ಪಾರ್ವೇಟಿ ಮಂಟಪದಲ್ಲಿ ಸ್ವಾಮಿಗೆ ಆಗಮೋಕ್ತ ಪೂಜೆಗಳನ್ನು ಸಲ್ಲಿಸಿ ಬೇಟೆಯನ್ನು ಲಾಂಛನವಾಗಿ ಮುಗಿಸಿ ಪುನ ಮೆರವಣಿಗೆಯಲ್ಲಿ ಆಲಯಕ್ಕೆ ಕರೆತರಲಾಯಿತು

# ತಿರುಮಲೆ ತಿರುಪತಿ ದೇವಸ್ಥಾನಗಳು,

### ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾ - ಯೋಜನೆ

ಎಂ ವಿ ಎಸ್ ಪ್ರಸಾದ್ ಐ ಎ ಎಸ್,
ಕಾರ್ಯನಿರ್ವಹಣಾಧಿಕಾರಿ

ಪ್ರಿಯ ಭಕ್ತ ಬಂಧುಗಳೆ

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ ಆಹಾರವನ್ನು ನೀಡಿದವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ ೧೯೮೫ ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಎಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ

ಭೋಜನದ ಗುಣಮಟ್ಟವೂ ಉತ್ಕೃಷ್ಟತೆಯೂ ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ

ನಿತ್ಯ ಅನ್ನದಾನಯೋಜನೆಯಲ್ಲಿ ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ ತಿ ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ ತಾವು ರೂ ೧೦೦೦ ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ ತಿ ದೇ ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ

ದೂರದೂರಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಎಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿ

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ ಅನ್ನದಾನ ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ ಹಾಗಾಗಿ ಅನ್ನದಾನ ಮಾಡಬೇಕು

ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ ತಮ್ಮ ವಿಶ್ವಾಸಿ
(ಎಂ ವಿ ಎಸ್ ಪ್ರಸಾದ್)

## ವೇದ ಶಾಸ್ತ್ರ ಸಮ್ಮೇಳನದ ಏರ್ಪಾಡುಗಳು

1992 ರ ಜನವರಿ 29 ರಿಂದ ಫೆಬ್ರವರಿ 3 ರವರೆಗೆ ನಡೆಯಲಾಗುವ ವೇದ ಶಾಸ್ತ್ರಗಳ ರಾಷ್ಟ್ರೀಯ ಸಮ್ಮೇಳನಕ್ಕೆ ಭಾರೀ ಪ್ರಮಾಣದಲ್ಲಿ ಏರ್ಪಾಡುಗಳು ನಡೆದಿವೆ ಆರುದಿನ ನಡೆಸಲಾಗುವ ಈ ಸಮ್ಮೇಳನದಲ್ಲಿ 2000 ಕ್ಕೂ ಮೀರಿದ ಪ್ರತಿನಿಧಿ ವಿದ್ವಾಂಸರು ಭಾಗವಹಿಸುವರೆಂದೂ ಹತ್ತರಿಂದ ಹದಿನೈದು ಮಂದಿ ವಿವಿಧ ಪೀಠಾಧಿಪತಿಗಳು ಆಗಮಿಸುವರೆಂದೂ ಅವರವರ ಆಚಾರ ಸಂಪ್ರದಾಯಗಳಿಗೆ ತಕ್ಕಂತೆ ಅವರ ವಸತಿ ಊಟೋಪಚಾರ ಸೌಕರ್ಯಗಳ ಏರ್ಪಾಡು ನಡೆದಿದೆಯೆಂದೂ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಅವರು ತಿಳಿಸಿದ್ದಾರೆ ವಿವಿಧ ವಿಶ್ವವಿದ್ಯಾನಿಲಯ ವಿದ್ಯಾಪೀಠಗಳ ಪ್ರಸಿದ್ಧ ಪಂಡಿತರೂ ಭಾಗವಹಿಸುವರೆಂದು ಅವರು ತಿಳಿಸಿದರು ಭಾರತದ ಉಪರಾಷ್ಟ್ರಪತಿ ಶ್ರೀ ಡಾ|| ಶಂಕರದಯಾಳ ಶರ್ಮ ಅವರು ಸಮ್ಮೇಳನವನ್ನು ಉದ್ಘಾಟಿಸಲು ಆಗಮಿಸುವವರಿದ್ದಾರೆ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಜನಾರ್ದನರೆಡ್ಡಿ ಅವರು ಸಮಾರೋಪ ಸಮಾರಂಭದಲ್ಲಿ ಭಾಗವಹಿಸುವರು ವೇದ ಶಾಸ್ತ್ರ ಸಮ್ಮೇಳನದ ನಿರ್ವಹಣೆಗೆ 30–35 ಲಕ್ಷ ರೂಗಳ ಅಂದಾಜು ವೆಚ್ಚವಾಗಬಹುದೆಂದೂ ನುಡಿದರು

ಸಮ್ಮೇಳನದ ಸಂದರ್ಭದಲ್ಲಿ ಪ್ರಸಿದ್ಧ ಕಲಾವಿದರಾದ ಶ್ರೀಮತಿ ಎಂ ಎಸ್ ಸುಬ್ಬುಲಕ್ಷ್ಮಿ ಶ್ರೀ ಮಂಗಳಂಪಲ್ಲಿ ಬಾಲಮುರಳೀಕೃಷ್ಣ ಶ್ರೀಮತಿ ಪಿ ಸುಶೀಲ ಶ್ರೀಮತಿ ಉಮಾ ಮಹೇಶ್ವರೀ ಭಾಗವತಾರಿಣಿ ಶ್ರೀ ವೆಂಪಟಿ ಚಿನಸತ್ಯಂ ಮೊದಲಾದವರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡುವರು

ತತ್ಸಂಬಂಧದಲ್ಲಿ ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್‌ನ ಹತ್ತು ಧ್ವನಿಸುರುಳಿಗಳನ್ನೂ ಧಾರ್ಮಿಕ ಗ್ರಂಥಗಳನ್ನೂ ಬಿಡುಗಡೆ ಮಾಡಲಾಗುವುದೆಂದೂ ಅವರು ತಿಳಿಸಿದರು

ವೇದ ಸಮ್ಮೇಳನದ ವಿವರಗಳನ್ನು ಆಡಿಯೋ ಕ್ಯಾಸೆಟ್ ರೂಪದಲ್ಲಿ ಪರಿರಕ್ಷಿಸುವುದಾಗಿಯೂ ಕಲಾಪಗಳನ್ನು ದಾಖಲು ಮಾಡಿಕೊಳ್ಳಲು ಮಂದಿಯನ್ನು ಸಿದ್ಧಗೊಳಿಸಿರುವುದಾಗಿಯೂ ತಿಳಿಸುತ್ತ ಅವರು 1967 ರಲ್ಲೂ ಇಂತಹ ಸಮ್ಮೇಳನ ನಡೆದಿತ್ತಾದರೂ ಈ ಪ್ರಮಾಣದಲ್ಲಿಯಲ್ಲವೆಂದು ತಿಳಿಸಿದರು

ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ ಹಿರಿಮೆ ಪರಂಪರೆ ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ

ತಿರುಮಲೆಯ ಸಾವಿರ ಕಂಬದ ಸಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು ಮಾನವ ಶಾಸ್ತ್ರ ಪ್ರಾಕ್ ವಸ್ತುಗಳನ್ನೂ ನೆಲ ನಸ್ಯಗಳ ಬಗೆಗಳನ್ನೂ ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ ಇಲ್ಲಿ ಅಪರೂಪದ ಮರದ ಕೆತ್ತನೆಗಳೂ ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ ತಿ ತಿ ದೇ ಮತ್ತಿತರ ಕಡೆಗಳಲ್ಲಿ ದೊರೆತ ಆಯುದಗಳೂ ಪ್ರದರ್ಶಿತವಾಗಿವೆ ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್ ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿ ನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ ಇದರ ಹಲವು ವಿಭಾಗಗಳೆಂದರೆ

ವೈಷ್ಣವತೆಯ ಉಗಮ ವಿಕಾಸ ವಾಸುದೇವ ವೃಷ್ಣಿಕುಂಜ ನಿಂದ ಆರಂಭವಾದ ಈ ವೈಷ್ಣವ ಧರ್ಮ ಇಂದು ಇನ್ನೂರಕ್ಕೂ ಮಿಗಿಲಾಗಿ ಉಪಶಾಖೆಗಳಾಗಿ ಬಾರತದಲ್ಲೆಲ್ಲ ಹರಡಿದೆ ದಕ್ಷಿಣ ಬಾರತದಲ್ಲಿನ ವೈಷ್ಣವ ಧರ್ಮ ವೈಖಾನಸ ಹಾಗೂ ಪಾಂಚರಾತ್ರಾಗಮಗಳಿಂದ ವಿಶೇಷ ಪ್ರಬಾವಿತವಾದದ್ದನ್ನು ಶಿಲ್ಪಗಳ ಚಿತ್ರಗಳನ್ನು ತೋರಿಸಿ ಅವುಗಳ ಬಹಿರಂಗ ಅರ್ಥವನ್ನೂ ಗೂಢಾರ್ಥವನ್ನೂ ವಿವರಿಸಲಾಗಿದೆ ಈ ವಿಭಾಗದಲ್ಲಿ ೧೧ನೇ ಶತಮಾನದ ವಿಶಿಷ್ಟ ವಿಗ್ರಹಗಳಿದ್ದು ಅವುಗಳನ್ನು ನಾಗುಲಾಪುರಂ ದೇವಾಲಯದಿಂದ ಸಂಗ್ರಹಿಸಲಾಗಿದೆ

ವಾಸ್ತುಶಾಸ್ತ್ರ ಈ ವಿಬಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ ಬೂಶುದ್ಧಿ ವಿಗ್ರಹಗಳ ದಿಕ್ಕು ಹಾಗೂ ಬೂಮಿಯ ನಿರ್ದೇಶನಗಳನ್ನು ನೀಡಿದ್ದು ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ

ಶಿಲ್ಪಶಾಸ್ತ್ರ ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ

ವಿಗ್ರಹಗಳು ವಿಷ್ಣುವಿನ ಹಲವಾರು ರೂಪಗಳ ಭಂಗಿಗಳೂ ಆಭರಣಗಳೂ ಪ್ರಾತ್ಯಕ್ಷಿತವಾಗಿವೆ

ಆಳ್ವಾರ್‌ಗಳು ವಿಶಿಷ್ಟಾದ್ವೈತ ತತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವಾರರ ಸಂದೇಶಗಳೇ ಆದಾರ ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು

ಸಮಯಾಚಾರಗಳು ಸನಾತನದ ದರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ ೧೦೮ ದಿವ್ಯಕ್ಷೇತ್ರಗಳೂ ೧೦೭ ಅರುಪಂಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ

ಕಲೆ ಹರಿದಾಸರ ಹಿರಿಮೆಯನ್ನೂ, ಬರತನಾಟ್ಯದ ಕರಗಳನ್ನೂ ವಿವರಿಸಲಾಗಿದೆ ವಿಷ್ಣು ಶಕ್ತಿ ಷಣ್ಮುಖ ಮೊದಲಾದ ೭ನೇ ಶತಕದ ವಿಗ್ರಹಗಳಿಂದ ಆರಂಬವಾದ ಸಂಗ್ರಹ ಆಕರ್ಷಕವಾಗಿದೆ ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ

**ಪರಂಪರೆಯ ಪರಿಚಯ ಹೊಂದಿರಿ ಒಮ್ಮೆ ಭೇಟಿ ನೀಡಿರಿ**

---

**ಕಾಲ ಬೆಳಗ್ಗೆ ೮ ರಿಂದ ರಾತ್ರಿ ೮**

**ಟಿಕೆಟ್ ರೂ ೧-೦೦ (ಹಿರಿಯರಿಗೆ)**
**" " ೦-೫೦ (ಕಿರಿಯರಿಗೆ)**

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ – ಮಾರ್ಚ್ 1992

## "ವೇದಶಾಸ್ತ್ರ ವಿಜ್ಞಾನ ಸಂಚಿಕೆ"

ತಿರುಮಲೆಯಲ್ಲಿ 1992 ರ ಜನವರಿ ಕೊನೆ ಹಾಗೂ ಫೆಬ್ರವರಿ ಮೊದಲಲ್ಲಿ ನಡೆದ ವೇದ ಶಾಸ್ತ್ರಗಳ ರಾಷ್ಟ್ರೀಯ ಸಮ್ಮೇಳನದ ವರದಿ ವಿಶೇಷ ಉಪನ್ಯಾಸಗಳ ಹೊಳಹನ್ನು ನೀಡಲು ಹೊರತರಲಾಗುವ ವಿಶೇಷ ಸಂಚಿಕೆ ಭಾರತದ ಖ್ಯಾತನಾಮರಾದ ವಿದ್ವಾಂಸರುಗಳು ಮಾಡಿದ ಭಾಷಣಗಳ ಸಾರಾಂಶವನ್ನು ಒಳಗೊಂಡು ಹೊರಬರುತ್ತಿದೆ ಪ್ರಕಟವಾಗುವ ಹಲವು ಲೇಖನ ಗಳು ಈ ರೀತಿಯವು –

1 **ವೇದ ವಿಜ್ಞಾನ ಸಂರಕ್ಷಣೆ,**

–ಪ್ರೊ|| ಬಿ ಬಿ ಚೌಬೆ

2 **ವೇದ ಸಂದೇಶ,**

–ಶ್ರೀ ಅ ರಾ ತಾತಾಚಾರ್ಯ

3 **ವೈದಿಕ ವಿಜ್ಞಾನ ವೈವಿಧ್ಯ,**

–ಪ್ರೊ|| ವಿ ಎನ್ ಝಾ

4 **ಋಗ್ವೇದದ ಮಹತ್ವ**

–ಡಾ|| ಎಸ್ ಜಿ ಕಾಂಟಾವಾಲಾ

5 **ಶಾಸ್ತ್ರಾಧ್ಯಯನದ ಅಗತ್ಯ**

–ಪ್ರೊ|| ಕೆಟಿ ಪಾಂಡುರಂಗಿ

–ಇತ್ಯಾದಿ

**–ತಮ್ಮ ಸಂಚಿಕೆಯನ್ನು ಕಾದಿರಿಸಿ**

****************************

# ತಿಂಗಳಿನ ಮುಖ್ಯದಿನಗಳು

## ಮಾರ್ಚ್ 1992

| | | |
|---|---|---|
| 2 | ಸೋಮ | ಶ್ರೀ ಕಪಿಲೇಶ್ವರಸ್ವಾಮಿ ಬ್ರಹ್ಮೋತ್ಸವದಲ್ಲಿ ನಂದಿವಾಹನೋತ್ಸವ ಶ್ರೀನಿವಾಸ ಮಂಗಾಪುರದಲ್ಲಿ ಬ್ರಹ್ಮೋತ್ಸವ ಚಕ್ರಸ್ನಾನ ಮಹಾಶಿವರಾತ್ರಿ |
| 3 | ಮಂಗಳ | ಶ್ರೀ ಕಪಿಲೇಶ್ವರಸ್ವಾಮಿ ಸನ್ನಿಧಿಯಲ್ಲಿ ಕಲ್ಯಾಣೋತ್ಸವ |
| 4 | ಬುಧ | ಶ್ರೀ ಕಪಿಲೇಶ್ವರಸ್ವಾಮಿ ಊಂಜಲ್‌ಸೇವೆ |
| 5 | ಗುರು | ಶ್ರೀ ಕಪಿಲೇಶ್ವರಸ್ವಾಮಿ ಬ್ರಹ್ಮೋತ್ಸವದಲ್ಲಿ ತ್ರಿಶೂಲಸ್ನಾನ |
| 14 | ಶನಿ | ತಿರುಮಲೆಯಲ್ಲಿ ತೆಪ್ಪೋತ್ಸವಾರಂಭ |
| 18 | ಬುಧ | ತಿರುಮಲೆಯಲ್ಲಿ ತೆಪ್ಪೋತ್ಸವ ಸಮಾಪ್ತಿ ಹೋಲಿ ಹಬ್ಬ |
| 25 | ಬುದ | ನಾಗುಲಾಪುರಂ ಶ್ರೀ ವೇದನಾರಾಯಣಸ್ವಾಮಿ ತೆಪ್ಪೋತ್ಸವಾರಂಭ |
| 27 | ಶುಕ್ರ | ನಾಗುಲಾಪುರಂ ಶ್ರೀ ವೇದನಾರಾಯಣಸ್ವಾಮಿ ತೆಪ್ಪೋತ್ಸವ ಸಮಾಪ್ತಿ |

# ಸಪ್ತಗಿರಿ

ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರ ಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು **ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ**

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯ ಗಳ ಬರಹಗಳು ತತ್ಸಂಬಂಧಿ ಫೋಟೋ ಗಳನ್ನೂ ಒಳಗೊಂಡಿದ್ದರೆ ಅನುಕೂಲಕರ

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ

೬) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು

ಮಿಕ್ಕ ವಿವರಗಳಿಗೆ

ಸಂಪಾದಕರು
**ಸಪ್ತಗಿರಿ**
ತಿ ತಿ ದೇವಸ್ಥಾನ ತಿರುಪತಿ ೫೧೭೫೦೭
ಚಿತ್ತೂರು ಜಿಲ್ಲೆ ಆಂ ಪ್ರ

Edited and Published on behalf of the T T Devasthanams by K. Subba Rao M A and printed

